ಅನುಬಂಧ - 2



# ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ : 2020-21ನೇ ಸಾಲಿನಲ್ಲಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಶಾಲಾ ಶೌಚಾಲಯ, ಆಟದ ಮೈದಾನ, ಶಾಲಾ ಕಾಂಪೌಂಡ್ ನಿರ್ಮಾಣ ಕಾಮಗಾರಿಗಳನ್ನು ಮಹಾತ್ಮಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆಯ ಅನುದಾನದ ಒಗ್ಗೂಡಿಸುವಿಕೆಯ ಮೂಲಕ ಅನುಷ್ಠಾನಗೊಳಿಸುವ ಬಗ್ಗೆ.

ಓದಲಾಗಿದೆ :

1) ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಯೋ೮/ಮ.ನ.ಯೋ/ಶೌಚಾಲಯ/01/2017-18, ದಿನಾಂಕ:04.08.2020
2) ಸರ್ಕಾರಿ ಆದೇಶ ಸಂಖ್ಯೆ: ಇಡಿ 84 ಯೋಯೋಕ 2020, ದಿನಾಂಕ:15.07.2020.
3) ಸರ್ಕಾರಿ ಆದೇಶ ಸಂಖ್ಯೆ: ಇಪಿ 82 ಯೋಯೋಕ 2020, ದಿನಾಂಕ:12.06.2020 ಮತ್ತು ದಿನಾಂಕ:10.08.2020.

******

ಪ್ರಸ್ತಾವನೆ:

ಮೇಲೆ ಓದಲಾದ ಕ್ರಮಾಂಕ (1)ರ ಪತ್ರದಲ್ಲಿ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು 2020-21ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ರಾಜ್ಯವಲಯದ ಮುಂದುವರೆದ ಯೋಜನೆ ಕಾರ್ಯಕ್ರಮದಡಿಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ 2202-01-053-0-01-200ರಡಿಯಲ್ಲಿ ರೂ.1603.00 ಲಕ್ಷ ಹಾಗೂ ಪ್ರೌಢ ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ 2202-02-053-0-01-059/422/423ಯಡಿಯಲ್ಲಿ ರೂ.1318.00 ಲಕ್ಷಗಳ ಅನುದಾನದಲ್ಲಿ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಅನುದಾನವನ್ನು ಒಗ್ಗೂಡಿಸುವಿಕೆಯ(Convergence) ಮೂಲಕ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಶಾಲಾ ಶೌಚಾಲಯ ನಿರ್ಮಾಣ, ಬಿಸಿಯೂಟದ ಅಡಿಗೆ ಕೋಣೆ ನಿರ್ಮಾಣ ಮತ್ತು ಪೌಷ್ಠಿಕ ತೋಟ ಅಭಿವೃದ್ಧಿ ಚಟುವಟಿಕೆಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಜಿಲ್ಲಾವಾರು ಹಂಚಿಕೆ ಮಾಡಿ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (2)ರ ಸರ್ಕಾರಿ ಆದೇಶದಲ್ಲಿ ಮಹಾತ್ಮಗಾಂಧಿ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಯಡಿ ಶಿಕ್ಷಣ ಇಲಾಖೆಯ ಅನುದಾನದ ಒಗ್ಗೂಡುವಿಕೆ (Convergence) ಮೂಲಕ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಶಾಲಾ ಶೌಚಾಲಯ ನಿರ್ಮಾಣ, ಬಿಸಿಯೂಟದ ಅಡಿಗೆ ಕೋಣೆ ನಿರ್ಮಾಣ ಮತ್ತು ಪೌಷ್ಠಿಕ ತೋಟ ಅಭಿವೃದ್ಧಿ

ಚಟುವಟಿಕೆಗಳ ಕಾಮಗಾರಿಗಳನ್ನು ಕೆಲವು ಷರತ್ತುಗಳೊಂದಿಗೆ ಅನುಷ್ಠಾನಗೊಳಿಸಲು ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರದ ಆದೇಶಗಳಲ್ಲಿ 2020-21ನೇ ಸಾಲಿನ ಆಯವ್ಯಯದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ 2202-01-053-0-01-200ರಡಿಯಲ್ಲಿ ರೂ.1603.00 ಲಕ್ಷ ಹಾಗೂ ಪ್ರೌಢ ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ 2202-02-053-0-01-059/422/423ಯಡಿಯಲ್ಲಿ ರೂ.1700.00 ಲಕ್ಷಗಳ ಅನುದಾನವನ್ನು ಎರಡು ತ್ರೈಮಾಸಿಕಗಳಲ್ಲಿ ಬಿಡುಗಡೆ ಮಾಡಲಾಗಿರುತ್ತದೆ.

ಮೇಲ್ಕಂಡ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಪಿ 150 ಯೋಸಕ 2020 ಬೆಂಗಳೂರು**

**ದಿನಾಂಕ:12.08.2020**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ 2020-21ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆಯ ರಾಜ್ಯವಲಯದ ಮುಂದುವರೆದ ಯೋಜನೆ ಕಾರ್ಯಕ್ರಮದಡಿಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಶಾಲಾ ಕಟ್ಟಡಗಳ ನಿರ್ವಹಣೆಯಡಿ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿಯಲ್ಲಿ ಸಾರ್ವಜನಿಕ ಶಿಕ್ಷಣ ಇಲಾಖೆ ಅನುದಾನವನ್ನು ಒಗ್ಗೂಡಿಸುವಿಕೆಯ(Convergence) ಮೂಲಕ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಿಗೆ ಶಾಲಾ ಶೌಚಾಲಯ, ಆಟದ ಮೈದಾನ, ಶಾಲಾ ಕಾಂಪೌಂಡ್ ನಿರ್ಮಾಣ, ಬಿಸಿಯೂಟದ ಅಡಿಗೆ ಕೋಣೆ ನಿರ್ಮಾಣ ಮತ್ತು ಪೌಷ್ಠಿಕ ತೋಟ ಅಭಿವೃದ್ಧಿ ಚಟುವಟಿಕೆಗಳ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು **ಅನುಬಂಧ**ದಲ್ಲಿ ಅನುದಾನ ಒದಗಿಸಿರುವಂತೆ ಜಿಲ್ಲಾವಾರು ಹಂಚಿಕೆ ಮಾಡಲಾಗಿದ್ದು, ಸದರಿ ಅನುದಾನವನ್ನು 2020-21ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2202-01-053-0-01-200ರಡಿಯಲ್ಲಿ ರೂ.1603.00ಲಕ್ಷ ಹಾಗೂ ಪ್ರೌಢ ಶಾಲಾ ಕಟ್ಟಡಗಳ ನಿರ್ವಹಣೆ ಲೆಕ್ಕ ಶೀರ್ಷಿಕೆ 2202-02-053-0-01-059/422/423ರಡಿಯಲ್ಲಿ ರೂ.1318.00 ಲಕ್ಷಗಳನ್ನು ತ್ರೈಮಾಸಿಕವಾರು ಬಿಡುಗಡೆ ಮಾಡಲಾದ/ಮಾಡಲಾಗುವ ಅನುದಾನದಿಂದ ನಿಯಮಾನುಸಾರ ಭರಿಸಲು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ಅನುಮತಿ ನೀಡಿ ಆದೇಶಿಸಿದೆ.

ಸದರಿ ಕಾಮಗಾರಿಗಳ ಅನುಷ್ಠಾನಕ್ಕಾಗಿ ಜಿಲ್ಲಾ ಪಂಚಾಯತ್, ಮುಖ್ಯಕಾರ್ಯನಿರ್ವಾಹಕಾಧಿಕಾರಿಗಳಿಂದ ಅನುಮೋದನೆ ಪಡೆದ ಕ್ರಿಯಾ ಯೋಜನೆಯನ್ನು ಸರ್ಕಾರದ ಘಟನ್ನೋತ್ತರ ಅನುಮೋದನೆಗೆ ಸಲ್ಲಿಸತಕ್ಕದ್ದು.

ಬಿಡುಗಡೆಯಾದ ಅನುದಾನಕ್ಕೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರು ಸೂಕ್ತ ಲೆಕ್ಕ ಪತ್ರಗಳನ್ನು ಇಡತಕ್ಕದ್ದು.

ಸದರಿ ಕಾಮಗಾರಿಗಳ ಆರ್ಥಿಕ ಮತ್ತು ಭೌತಿಕ ಪ್ರಗತಿಗಳ ವಿವರಗಳನ್ನು ತ್ರೈಮಾಸಿಕವಾರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು ಹಾಗೂ ಸದರಿ ಕಾಮಗಾರಿಗಳನ್ನು ಕಾಲಮಿತಿ ಯೋಜನೆಯಾಗಿ ನಿರ್ವಹಿಸತಕ್ಕದ್ದು.

ಕಾಮಗಾರಿಗಳಿಗೆ ಸಂಬಂಧಿಸಿದಂತೆ ಪ್ರಚಲಿತ ಎಲ್ಲಾ ಖರೀದಿ ನಿಯಮಗಳನ್ನು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಕಾಯ್ದೆ-1999 ಹಾಗೂ ಅದರಡಿಯಲ್ಲಿ ಹೊರಡಿಸಲಾದ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು. ಭರಿಸಲಾದ ವೆಚ್ಚದ ವಿವರಗಳನ್ನು ಕಡ್ಡಾಯವಾಗಿ ಹೊಸ ಡಿಜಿಟಲ್ ಸಪೋರ್ಟ್ ಸಿಸ್ಟಂ (ಅವಲೋಕನ) ತಂತ್ರಾಂಶದಲ್ಲಿ ಇಂದೀಕರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್.ಡಿ 02 ಟಿ.ಎಫ್.ಪಿ 2020 ದಿನಾಂಕ:30.05.2020 ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ
ಮತ್ತು ಅವರ ಹೆಸರಿನಲ್ಲಿ

12.08.2020

(ಎಸ್.ಆರ್.ಎಸ್.ನಾಧನ್)
ವಿಶೇಷಾಧಿಕಾರಿ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ

**ಇವರಿಗೆ;**

1. ಮಹಾಲೇಖಪಾಲರು, (ಆಡಿಟ್ 1 & 2) ಕರ್ನಾಟಕ, ಬೆಂಗಳೂರು.
2. ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
3. ಎಲ್ಲಾ ಜಿಲ್ಲೆಗಳ ಜಿಲ್ಲಾ ಪಂಚಾಯತ್ ಕಾರ್ಯನಿರ್ವಾಹಕಾಧಿಕಾರಿಗಳು
4. ನಿರ್ದೇಶಕರು, (ಪ್ರಾಥಮಿಕ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
5. ನಿರ್ದೇಶಕರು, (ಪ್ರೌಢ ಶಿಕ್ಷಣ), ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು.
6. ಎಲ್ಲಾ ಜಿಲ್ಲೆಗಳ ಜಿಲ್ಲಾ ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ.
7. ನಿರ್ದೇಶಕರು, ಖಜಾನಾ ಇಲಾಖೆ, ವಿಶ್ವೇಶ್ವರಯ್ಯ ಮುಖ್ಯ ಗೋಪುರ, ಬೆಂಗಳೂರು.
8. ಉಪನಿರ್ದೇಶಕರು, ಖಜಾನಾ ಗಣಕ ಕೇಂದ್ರ, ನಂ.49, ಖನಿಜ ಭವನ, ರೇಸ್ಕೋರ್ಸ್ ರಸ್ತೆ, ಬೆಂಗಳೂರು.
9. ಖಜಾನಾಧಿಕಾರಿಗಳು, ರಾಜ್ಯ ಹುಜೂರ್ ಖಜಾನೆ, ಬೆಂಗಳೂರು.
10. ಸರ್ಕಾರದ ಉಪಕಾರ್ಯದರ್ಶಿ-2, ಆರ್ಥಿಕ ಇಲಾಖೆ, ವಿಧಾನ ಸೌಧ, ಬೆಂಗಳೂರು.
11. ಸಾಪ್ತಾಹಿಕ ರಾಜ್ಯ ಪತ್ರ/ಶಾಖಾರಕ್ಷ ಕಡತ/ಹೆಚ್ಚುವರಿ ಪ್ರತಿಗಳು.

**ಪ್ರತಿ ಮಾಹಿತಿಗಾಗಿ.**

1. ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿಗಳು, ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆ, ಬೆಂಗಳೂರು
3. ಆಂತರಿಕ ಆರ್ಥಿಕ ಸಲಹೆಗಾರರ ಆಪ್ತ ಸಹಾಯಕರು, ಶಿಕ್ಷಣ ಇಲಾಖೆ, ಬಹುಮಹಡಿಗಳ ಕಟ್ಟಡ, ಬೆಂಗಳೂರು.

File No.EP/150/YSK/2020-PLAN-EP-Sec

ಸರ್ಕಾರಿ ಆದೇಶ ಸಂಖ್ಯೆ: ಇಪಿ 150 ಯೋಸಕ 2020, ದಿನಾಂಕ:12.08.2020ಕ್ಕೆ ಅನುಬಂಧ

2020-21ನೇ ಸಾಲಿನ ಮಹಾತ್ಮ ಗಾಂಧಿ ನರೇಗಾ ಯೋಜನೆಯಡಿ ಇಲಾಖಾ ಅನುದಾನ ಒಗ್ಗೂಡಿಸುವಿಕೆ (Convergence) ಮೂಲಕ ಕೈಗೊಳ್ಳಬೇಕಾದ ಕಾಮಗಾರಿಗಳಿಗೆ ಜಿಲ್ಲಾವಾರು ಬಿಡುಗಡೆ ಮಾಡಬೇಕಾದ ಅನುದಾನದ ವಿವರ

| ಕ್ರ.ಸಂ | ಜಿಲ್ಲೆ | ಲೆಕ್ಕಶೀರ್ಷಿಕೆ/ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ವಹಣೆ (2202-01-053-0-01) | ಲೆಕ್ಕಶೀರ್ಷಿಕೆ/ಪ್ರೌಢ ಶಾಲಾ ಕಟ್ಟಡಗಳ ನಿರ್ವಹಣೆ (2202-02-053-0-01) | | | ರೂ.ಲಕ್ಷಗಳಲ್ಲಿ | |
|---|---|---|---|---|---|---|---|
| | | 200 | 059 | 422 | 423 | ಒಟ್ಟು | ಒಟ್ಟು ಮೊತ್ತ |
| 1 | BAGALKOT | 48.18 | 21.50 | 17.01 | 13.39 | 51.89 | 100.08 |
| 2 | BALLARI | 59.55 | 26.58 | 21.03 | 16.55 | 64.17 | 123.72 |
| 3 | BELAGAVI CHIKKODI | 66.33 | 21.04 | 16.64 | 13.10 | 50.78 | 117.11 |
| 4 | BELAGAVI | 51.44 | 15.03 | 11.89 | 9.36 | 36.27 | 87.71 |
| 5 | BENGALURU RURAL | 39.85 | 7.40 | 5.85 | 4.61 | 17.86 | 57.71 |
| 6 | BENGALURU U NORTH | 18.11 | 6.70 | 5.30 | 4.17 | 16.18 | 34.29 |
| 7 | BENGALURU U SOUTH | 31.96 | 9.94 | 7.86 | 6.19 | 23.99 | 55.96 |
| 8 | BIDAR | 46.07 | 19.19 | 15.18 | 11.95 | 46.31 | 92.39 |
| 9 | CHAMARAJANAGARA | 27.55 | 9.94 | 7.86 | 6.19 | 23.99 | 51.55 |
| 10 | CHIKKABALLAPURA | 53.11 | 12.83 | 10.15 | 7.99 | 30.97 | 84.08 |
| 11 | CHIKKAMANGALURU | 49.29 | 13.41 | 10.61 | 8.35 | 32.36 | 81.66 |
| 12 | CHITRADURGA | 60.81 | 13.06 | 10.33 | 8.13 | 31.53 | 92.34 |
| 13 | DAKSHINA KANNADA | 33.85 | 19.53 | 15.45 | 12.16 | 47.15 | 81.00 |
| 14 | DAVANAGERE | 39.92 | 15.37 | 12.16 | 9.57 | 37.11 | 77.03 |
| 15 | DHARWAD | 28.26 | 12.48 | 9.88 | 7.77 | 30.13 | 58.39 |
| 16 | GADAG | 22.74 | 13.06 | 10.33 | 8.13 | 31.53 | 54.27 |
| 17 | HASSAN | 82.07 | 27.85 | 22.04 | 17.35 | 67.24 | 149.31 |
| 18 | HAVERI | 42.89 | 16.30 | 12.89 | 10.15 | 39.34 | 82.23 |
| 19 | KALBURGI | 65.55 | 33.86 | 26.79 | 21.09 | 81.75 | 147.30 |
| 20 | KODAGU | 13.96 | 5.43 | 4.30 | 3.38 | 13.11 | 27.08 |
| 21 | KOLAR | 66.66 | 14.56 | 11.52 | 9.07 | 35.15 | 101.82 |
| 22 | KOPPAL | 35.48 | 18.72 | 14.81 | 11.66 | 45.20 | 80.68 |
| 23 | MANDYA | 59.11 | 24.73 | 19.57 | 15.40 | 59.71 | 118.82 |
| 24 | MYSURU | 70.07 | 26.81 | 21.22 | 16.70 | 64.73 | 134.80 |
| 25 | RAICHUR | 53.96 | 24.85 | 19.66 | 15.47 | 59.99 | 113.95 |
| 26 | RAMANAGARA | 46.00 | 12.37 | 9.78 | 7.70 | 29.85 | 75.85 |
| 27 | SHIVAMOGGA | 68.18 | 18.96 | 15.00 | 11.80 | 45.76 | 113.94 |
| 28 | MADHUGIRI | 46.63 | 10.98 | 8.69 | 6.84 | 26.51 | 73.13 |
| 29 | TUMAKURU | 74.55 | 15.26 | 12.07 | 9.50 | 36.83 | 111.38 |
| 30 | UDUPI | 21.78 | 12.25 | 9.69 | 7.63 | 29.57 | 51.35 |
| 31 | SIRSI | 41.33 | 8.55 | 6.77 | 5.33 | 20.65 | 61.98 |
| 32 | UTTARA KANNADA | 34.63 | 5.66 | 4.48 | 3.53 | 13.67 | 48.30 |
| 33 | VIJAYAPURA | 68.70 | 17.68 | 13.99 | 11.01 | 42.69 | 111.39 |
| 34 | YADAGIRI | 34.37 | 14.10 | 11.16 | 8.78 | 34.04 | 68.41 |
| | ಒಟ್ಟು | **1602.99** | **546.00** | **432.00** | **340.00** | **1318.00** | **2920.99** |

ಶ್ರೀ ಎಸ್.ಆರ್.ಎಸ್. ನಾಧನ್
ವಿಶೇಷಾಧಿಕಾರಿ, ಹಾಗೂ ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಜನೆ)
ಶಿಕ್ಷಣ ಇಲಾಖೆ

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 482
ಸದಸ್ಯರ ಹೆಸರು : ಶ್ರೀ ಮುನಿಯಪ್ಪ.ವಿ (ಶಿಡ್ಲಘಟ್ಟ)
ಉತ್ತರಿಸಬೇಕಾದ ದಿನಾಂಕ : 16-12-2021
ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

| | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಕೆರೆ ಮತ್ತು ಕಾಲುವೆಗಳ ಒಳಭಾಗದಲ್ಲಿ ವಿದ್ಯುತ್ ಕಂಬ ಮತ್ತು ಪರಿವರ್ತಕಗಳನ್ನು ಅಳವಡಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಮಂಗಳೂರು, ಚಾಮುಂಡೇಶ್ವರಿ, ಹುಬ್ಬಳ್ಳಿ, ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಯಲ್ಲಿ ಕೆರೆ ಮತ್ತು ಕಾಲುವೆಗಳ ಒಳಭಾಗದಲ್ಲಿ ವಿದ್ಯುತ್ ಕಂಬ ಮತ್ತು ಪರಿವರ್ತಕಗಳನ್ನು ಅಳವಡಿಸಿರುವುದಿಲ್ಲ.<br><br>ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ ಪ್ರಮುಖವಾಗಿ ಗ್ರಾಮೀಣ ಪ್ರದೇಶಗಳಾದ ಬೆಂಗಳೂರು ಗ್ರಾಮೀಣ, ಕೋಲಾರ, ರಾಮನಗರ, ತುಮಕೂರು ಮತ್ತು ದಾವಣಗೆರೆ ಜಿಲ್ಲಾ ಪರಿಮಿತಿಯಲ್ಲಿ ಅನಿವಾರ್ಯ ಸಂದರ್ಭಗಳಲ್ಲಿ ಅಳವಡಿಸಲಾಗಿರುತ್ತದೆ.<br><br>ಕೋಲಾರ ಜಿಲ್ಲೆ ಪರಿಮಿತಿಯಲ್ಲಿ ಸುಮಾರು 10-15 ವರ್ಷಗಳ ಹಿಂದೆ ಕೆರೆಗಳ ಒಳಭಾಗದಲ್ಲಿ ಅಳವಡಿಸಿದ್ದ ಕಂಬಗಳನ್ನು ಸ್ಥಳಾಂತರಿಸಲು ಕ್ರಮ ವಹಿಸಲಾಗುತ್ತಿದೆ. |
| ಆ) | ಬಂದಿದ್ದಲ್ಲಿ, ಕೆರೆಗಳಲ್ಲಿ ಮುಳುಗಿರುವ ಸಾವಿರಾರು ವಿದ್ಯುತ್ ಕಂಬಗಳು ಸೇವೆ ನೀಡಲಾಗದೆ ವ್ಯರ್ಥವಾಗಿರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುವುದಿಲ್ಲವೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯಲ್ಲಿ 11 ಕೆವಿ ಮಾರ್ಗಗಳನ್ನು ಎಳೆಯುವ ಸಂದರ್ಭದಲ್ಲಿ ಕೆರೆಗಳ ಸ್ಥಳಗಳಲ್ಲಿ ನೀರು ಇಲ್ಲದೆ ಇರುವ ಜಾಗಗಳಲ್ಲಿ ಅಂದರೆ ಕೆರೆ ಅಂಚಿನಲ್ಲಿ ವಿದ್ಯುತ್ ಕಂಬಗಳನ್ನು ಸ್ಥಾಪಿಸಲಾಗಿರುತ್ತದೆ.<br><br>ಬಹುತೇಕ ವಿದ್ಯುತ್ ಕಂಬಗಳು ಕೆರೆಗಳಲ್ಲಿ ಸಂಪೂರ್ಣವಾಗಿ ಮುಳುಗಡೆಯಾಗಿರುವುದಿಲ್ಲ. ಈ ವರ್ಷ ಮಳೆಯ ಪ್ರಮಾಣವು ಅಧಿಕವಾಗಿರುವುದರಿಂದ ನೀರು ನಿಂತಿರುತ್ತದೆ ಹಾಗೂ ವಿದ್ಯುತ್ ಕಂಬ ಮತ್ತು ಪರಿವರ್ತಕಗಳು ಹಾನಿಯಾಗಿರುವುದಿಲ್ಲ. ಇದರಿಂದಾಗಿ ಸರ್ಕಾರದ ಬೊಕ್ಕಸಕ್ಕೆ ಯಾವುದೇ ನಷ್ಟವಾಗಿರುವುದಿಲ್ಲ.<br><br>ಮುಂದುವರೆದು, ಕೋಲಾರ ಜಿಲ್ಲೆ ವ್ಯಾಪ್ತಿಯ, ಕೋಲಾರ ತಾಲೂಕಿನಲ್ಲಿ 7 ಕೆರೆಗಳನ್ನು ಗುರಿತಿಸಲಾಗಿದ್ದು, 4 ಕೆರೆಗಳ ಒಳಭಾಗದಲ್ಲಿದ್ದ, ಕಂಬಗಳನ್ನು ಈಗಾಗಲೇ ಸ್ಥಳಾಂತರಿಸಲಾಗಿದ್ದು, ಇನ್ನುಳಿದ 3 ಕೆರೆಗಳಲ್ಲಿ ಭಾರಿ ಮಳೆ ಮತ್ತು ಕೆ.ಸಿ ವ್ಯಾಲಿ ನೀರಿನಿಂದ ಕೆರೆಗಳು ತುಂಬಿರುವುದರಿಂದ ಕಾಮಗಾರಿಗಳು ವಿಳಂಬವಾಗಿರುತ್ತದೆ. |
| ಇ) | ಅಂತಹ ಕಂಬಗಳ ಸ್ಥಳಾಂತರಕ್ಕೆ ಆದೇಶ ಮಾಡುವ ಉದ್ದೇಶ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕ್ರಮವಹಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | |

| | | |
|---|---|---|
| | | ಮಾಲೂರು ತಾಲೂಕಿನ ವ್ಯಾಪ್ತಿಯ, ಅಬ್ಬೇನಹಳ್ಳಿ ಹಾಗೂ ತಂಬಿಹಳ್ಳಿ ಗ್ರಾಮದ 2 ಕೆರೆಗಳನ್ನು ಗುರುತಿಸಲಾಗಿದ್ದು 2 ಕೆರೆಯ ಕಂಬಗಳನ್ನು ಸ್ಥಳಾಂತರಿಸಲು ಈಗಾಗಲೇ ಮಂಜೂರಾತಿ ನೀಡಿದ್ದು, ಕಾಮಗಾರಿ ಪ್ರಗತಿಯಲ್ಲಿರುತ್ತದೆ.<br><br>ಚಿಕ್ಕಬಳ್ಳಾಪುರ ಮತ್ತು ಗುಡಿಬಂಡೆ ತಾಲ್ಲೂಕಿನಲ್ಲಿ 20 ಕೆರೆಗಳನ್ನು ಗುರುತಿಸಲಾಗಿದ್ದು, 4 ಕೆರೆಯ ಕಂಬಗಳನ್ನು ಈಗಾಗಲೇ ಸ್ಥಳಾಂತರಿಸಲಾಗಿದ್ದು, ಇನ್ನುಳಿದ 16 ಕೆರೆಗಳಲ್ಲಿನ ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು.<br><br>ಗೌರಿಬಿದನೂರು ತಾಲ್ಲೂಕಿನಲ್ಲಿ 8 ಕೆರೆಗಳಲ್ಲಿನ ವಿದ್ಯುತ್ ಕಂಬಗಳನ್ನು ಸ್ಥಳಾಂತರಿಸಲು ಭಾರಿ ಮಳೆಯಿಂದ ಕೆರೆಗಳು ತುಂಬಿರುವುದರಿಂದ ಕಾಮಗಾರಿಗಳು ವಿಳಂಬವಾಗಿರುತ್ತದೆ.<br><br>ಶಿಡ್ಲಘಟ್ಟ ತಾಲ್ಲೂಕಿನಲ್ಲಿ 7 ಕೆರೆಗಳನ್ನು ಗುರುತಿಸಲಾಗಿದ್ದು, 2 ಕೆರೆಯ ಕಂಬಗಳನ್ನು ಈಗಾಗಲೇ ಸ್ಥಳಾಂತರಿಸಿದ್ದು ಭಾರಿ ಮಳೆಯಿಂದ ಸದರಿ ಕೆರೆಗಳು ತುಂಬಿರುವುದರಿಂದ ಕಾಮಗಾರಿಗಳು ವಿಳಂಬವಾಗಿರುತ್ತದೆ. |

ಸಂಖ್ಯೆ: ಎನರ್ಜಿ 282 ಪಿಪಿಎಂ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು

# ಕರ್ನಾಟಕ ವಿಧಾನ ಸಭೆ

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 483
2. ವಿಧಾನಸಭಾ ಸದಸ್ಯರ ಹೆಸರು : ಶ್ರೀ ಮುನಿಯಪ್ಪ ವಿ.
3. ಉತ್ತರಿಸಬೇಕಾದ ದಿನಾಂಕ : 16-12-2021
4. ಉತ್ತರಿಸುವ ಸಚಿವರು : ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಕೆರೆಗಳಲ್ಲಿ ಬೆಳೆದಿರುವ ಜಾಲಿ ಮರಗಳನ್ನು ಬೆಳೆದಿರುವುದು ಮತ್ತು ಅದನ್ನು ತೆರವುಗೊಳಿಸಲು ಸರ್ಕಾರವು ಕೈಗೊಂಡ ಕ್ರಮಗಳೇನು; (ವಿವರ ನೀಡುವುದು) | ರಾಜ್ಯದಲ್ಲಿನ ಕೆರೆಗಳಲ್ಲಿ ಜಾಲಿ ಮರಗಳು ಮತ್ತು ಸೀಮೆ ಜಾಲಿ ಮರಗಳು ಬೆಳೆದಿರುವುದು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಸದರಿ ಜಾಲಿ ಮರಗಳನ್ನು ನಿಯಮಾನುಸಾರ ತೆರವುಗೊಳಿಸುವ ಬಗ್ಗೆ ಸಂಬಂಧಿಸಿದ ಉಪ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಜಿಲ್ಲಾ ಮಟ್ಟದ ಅಧಿಕಾರಿಗಳು ಕೋರಿದ್ದು, ಸದರಿಯವರು ಜಾಲಿ ಮರಗಳನ್ನು ನಿಯಮಾನುಸಾರ ತೆರವುಗೊಳಿಸಲು ವಲಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಸೂಚಿಸಿದ್ದು, ಗ್ರಾಮ ಪಂಚಾಯತಿಗಳ ಸಹಯೋಗದೊಂದಿಗೆ ತೆರವುಗೊಳಿಸುವ ಬಗ್ಗೆ ಕ್ರಮವಹಿಸಲಾಗುತ್ತಿದೆ. |
| ಆ) | ಮಳೆಯಿಂದ ಸಂಗ್ರಹವಾಗುವ ನೀರು ಕೆರೆಯಲ್ಲಿ ಬೆಳೆದಿರುವ ಮರಗಳಿಗೆ ನೀಡಿ, ಕುಡಿಯುವ ನೀರಿನ ಬೇಡಿಕೆಗೆ ಇನ್ನಾವುದೋ ಸ್ಥಳದಿಂದ ನೀರನ್ನು ತರುವುದರಿಂದ ಸರ್ಕಾರದ ಬೊಕ್ಕಸಕ್ಕೆ ನಷ್ಟ ಉಂಟಾಗುವುದಿಲ್ಲವೇ; | ಸಣ್ಣ ನೀರಾವರಿ ಕೆರೆಗಳಿಂದ ಕೃಷಿಗೆ ನೀರು ಒದಗಿಸುವುದು ಇಲಾಖೆಯ ಮುಖ್ಯ ಧ್ಯೆಯೋದ್ದೇಶವಾಗಿರುತ್ತದೆ.<br>ಸ್ಥಳೀಯವಾಗಿ ಕುಡಿಯುವ ನೀರಿನ ಬೇಡಿಕೆಯಿದ್ದಲ್ಲಿ ನಿರಂತರವಾಗಿ ಕುಡಿಯುವ ನೀರನ್ನು ಪೂರೈಸಲು ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯಿಂದ (RWS) ಕ್ರಮವಹಿಸಲಾಗುತ್ತದೆ. |

| | | |
|---|---|---|
| ಇ) | ಕೆರೆ ಮತ್ತು ಕಾಲುವೆಗಳ ಅಂಚಿನಲ್ಲಿ ಅರಣ್ಯ ಅಭಿವೃದ್ಧಿ ಮಾಡುವ ಉದ್ದೇಶ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಕ್ರಮವಹಿಸಲಾಗುವುದು? (ಸಂಪೂರ್ಣ ವಿವರ ನೀಡುವುದು) | ಕೆರೆ ಮತ್ತು ಕಾಲುವೆಗಳ ಅಂಚಿನಲ್ಲಿ ಅರಣ್ಯ ಅಭಿವೃದ್ಧಿ ಪಡಿಸುವ ಉದ್ದೇಶ ಇರುವುದಿಲ್ಲ. |

ಸಂಖ್ಯೆ: ಎಂಐಡಿ 165 ಎಲ್‌ಸಿಕ್ಯೂ 2021.

( ಜೆ.ಸಿ.ಮಾಧುಸ್ವಾಮಿ )

ಕಾನೂನು, ಸಂಸದೀಯ ವ್ಯವಹಾರಗಳು ಮತ್ತು
ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು.

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 484**
**ಮಾನ್ಯ ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)**
**ಉತ್ತರಿಸಬೇಕಾದ ದಿನಾಂಕ : 16-12-2021**
**ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಪುತ್ತೂರು ವಿಧಾನಸಭಾ ಕ್ಷೇತ್ರವ್ಯಾಪ್ತಿಯ ವಿಟ್ಲ ಸಮುದಾಯ ಆರೋಗ್ಯ ಕೇಂದ್ರದ ಸೌಲಭ್ಯ ಪಡೆಯುವ ಸಾರ್ವಜನಿಕರ ಸಂಖ್ಯೆ ಹೆಚ್ಚಾಗಿರುವುದರಿಂದ ಆರೋಗ್ಯ ಕೇಂದ್ರವನ್ನು ಮೇಲ್ದರ್ಜೆಗೆ ಏರಿಸುವ ಯೋಜನೆ ಸರ್ಕಾರದ ಮುಂದಿದೆಯೇ? (ಸಂಪೂರ್ಣ ವಿವರ ನೀಡುವುದು) | ಇಲ್ಲ. |

**ಸಂಖ್ಯೆ: ಆಕುಕ 484 ಚುರಪ್ರ 2021**

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

## ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 485

**ಸದಸ್ಯರ ಹೆಸರು** : ಶ್ರೀ ಸಂಜೀವ ಮಠಂದೂರ್ (ಪುತ್ತೂರು)

**ಉತ್ತರಿಸಬೇಕಾದ ದಿನಾಂಕ** : 16-12-2021

**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಪ್ರಸಕ್ತ ವರ್ಷದಲ್ಲಿ ರಾಜ್ಯದ ಎಲ್ಲಾ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚಾಗಿರುವುದರಿಂದ ಶಾಲಾ ಕೊಠಡಿಗಳ ಮತ್ತು ಶಿಕ್ಷಕರ ಕೊರತೆ ತಲೆದೋರಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರ ಯಾವ ಕ್ರಮ ಕೈಗೊಂಡಿದೆ? (ವಿವರ ನೀಡುವುದು.)</td><td>ಬಂದಿದೆ.<br><br>ಕೊಠಡಿಗಳ ಕೊರತೆ ಬಗ್ಗೆ ಕಳೆದ ಮೂರು ವರ್ಷಗಳಲ್ಲಿ ರಾಜ್ಯವಲಯ ಮುಂದುವರೆದ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಕೊಠಡಿಗಳ ನಿರ್ಮಾಣ ಮತ್ತು ದುರಸ್ಥಿಗೆ ಬಿಡುಗಡೆಯಾದ ಅನುದಾನದ ವಿವರ<br><br>ಕೊಠಡಿ ನಿರ್ಮಾಣ<br>
<table>
<tr><th>ವರ್ಷ</th><th>ಶಾಲೆಗಳ ಸಂಖ್ಯೆ</th><th>ಕೊಠಡಿಗಳ ಸಂಖ್ಯೆ</th><th>ಬಿಡುಗಡೆಯಾದ ಅನುದಾನ(ಲಕ್ಷಗಳಲ್ಲಿ)</th></tr>
<tr><td>2018-19</td><td>1871</td><td>2909</td><td>17415.68</td></tr>
<tr><td>2019-20</td><td>632</td><td>973</td><td>21982.00</td></tr>
<tr><td>2020-21</td><td>1006</td><td>1483</td><td>9000.00</td></tr>
<tr><td>ಒಟ್ಟು</td><td>3509</td><td>5365</td><td>48397.68</td></tr>
</table>
ಕೊಠಡಿಗಳ ದುರಸ್ಥಿ<br>
<table>
<tr><th>ವರ್ಷ</th><th>ಶಾಲೆಗಳ ಸಂಖ್ಯೆ</th><th>ಕೊಠಡಿಗಳ ಸಂಖ್ಯೆ</th><th>ಬಿಡುಗಡೆಯಾದ ಅನುದಾನ(ಲಕ್ಷಗಳಲ್ಲಿ)</th></tr>
<tr><td>2018-19</td><td>2697</td><td>4195</td><td>4242.44</td></tr>
<tr><td>2019-20</td><td>1065</td><td>5003</td><td>3681.00</td></tr>
<tr><td>2020-21</td><td>187</td><td>187</td><td>476.11</td></tr>
<tr><td>ಒಟ್ಟು</td><td>3949</td><td>9385</td><td>8399.55</td></tr>
</table>
<ul><li>2019-20ನೇ ಸಾಲಿನಲ್ಲಿ ಆರ್.ಐ.ಡಿ.ಎಫ್-25 ಅಡಿಯಲ್ಲಿ</li></ul></td></tr>
</table>

| | | |
|---|---|---|
| | | ಅಧಿಕ ಮಳೆಯಿಂದ ಹಾನಿಯಾದ 3386 ಸರ್ಕಾರಿ ಶಾಲೆಗಳ 6469 ಕೊಠಡಿಗಳ ಮರು ನಿರ್ಮಾಣಕ್ಕಾಗಿ ರೂ.75807.30ಲಕ್ಷಗಳ ಅನುದಾನವನ್ನು ಮಂಜೂರು ಮಾಡಿದೆ.<br>• 2019-20ನೇ ಸಾಲಿನಲ್ಲಿ ಮಳೆಯಿಂದ ಹಾನಿಗೊಳಗಾದ 6196 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ 13260 ಕೊಠಡಿಗಳ ದುರಸ್ಥಿಗೆ ರೂ. 19951.75 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br>• 2020-21ನೇ ಸಾಲಿನಲ್ಲಿ ಅತಿವೃಷ್ಟಿ/ಪ್ರವಾಹದಿಂದ ಹಾನಿಗೀಡಾದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ತುರ್ತು ದುರಸ್ಥಿಗೆ ರೂ. 7557.99 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br><br>2021-22ನೇ ಸಾಲಿನಲ್ಲಿ ಕೊಠಡಿಗಳ ದುರಸ್ಥಿ, ನೂತನ ಶಾಲಾ ಕಟ್ಟಡಗಳ ನಿರ್ಮಾಣ, ಶಾಲಾ ಕೊಠಡಿಗಳ ನಿರ್ಮಾಣ, ಶೌಚಾಲಯ ನಿರ್ಮಾಣ ಮತ್ತು ದುರಸ್ಥಿ ಹಾಗೂ ಮೂಲಭೂತ ಸೌಲಭ್ಯ ಗಳಿಗಾಗಿ ಇಡೀ ರಾಜ್ಯಕ್ಕೆ ಬಿಡುಗಡೆ ಮಾಡಿರುವ ಅನುದಾನ ರೂ.33243.64 ಲಕ್ಷಗಳು. (ಜಿಲ್ಲಾವಾರು ವಿವರಗಳನ್ನು ಅನುಬಂಧದಲ್ಲಿ ಲಗತ್ತಿಸಿದೆ).<br><br>ಅನುದಾನದ ಲಭ್ಯತೆಯ ಆಧರಿಸಿ ಕೊಠಡಿ ಅವಶ್ಯಕತೆಯಿರುವ ಕಡೆ ಆದ್ಯತೆಯ ಮೇರೆಗೆ ಹಂತ ಹಂತವಾಗಿ ಕಾಮಗಾರಿ ಕೈಗೊಳ್ಳಲು ಕ್ರಮ ವಹಿಸಿದೆ.<br><br>**ಶಿಕ್ಷಕರ ಕೊರತೆ**<br>• ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಹುದ್ದೆಗಳಿಗೆ ಎದುರಾಗಿ ಆರ್ಥಿಕ ಇಲಾಖೆಯ ಅನುಮತಿ ನೀಡಿರುವ 18000 ಅತಿಥಿ ಶಿಕ್ಷಕರನ್ನು ತಾತ್ಕಾಲಿಕವಾಗಿ ನೇಮಕ ಮಾಡಿಕೊಳ್ಳಲು ಜಿಲ್ಲೆಗಳಿಗೆ ಹಂಚಿಕೆ ಮಾಡಲಾಗಿದೆ.<br><br>ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ದಿನಾಂಕ |

| | | |
|---|---|---|
| | | 31.01.2021ರ ಅಂತ್ಯಕ್ಕೆ ಖಾಲಿ ಇದ್ದ ಪದವೀಧರ ಪ್ರಾಥಮಿಕ ಶಿಕ್ಷಕರ ಒಟ್ಟು- 25,813 ಹುದ್ದೆಗಳ ಪೈಕಿ ಆರ್ಥಿಕ ಇಲಾಖೆಯು 15,000 ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲು ಅನುಮೋದನೆ ನೀಡಿದ್ದು. ಶೀಘ್ರದಲ್ಲೇ ಅಧಿಸೂಚನೆ ಹೊರಡಿಸಲು ಕ್ರಮವಹಿಸಲಾಗುವುದು. |

**ಸಂಖ್ಯೆ**: ಇಪಿ 55 ಪಿಎಂಎ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ
ಹಾಗೂ ಸಕಾಲ ಸಚಿವರು.

ಅನುಬಂಧ (ಅನುದಾನ ರೂ.ಲಕ್ಷಗಳಲ್ಲಿ)

| Sl No | DISTRICTS | Primary School Repairs | 155 MLA Constancies for repairs | 2 Years package (PRIMARY SCHOOL) | Jnanapeeta awardees school | 2 Years package (HIGH SCHOOL) | RIDF | Amrutha Shala (Rs.10Lakhs/School) | Maintenance and Repair of Toilets | Total |
|---|---|---|---|---|---|---|---|---|---|---|
| | | 2202-01-053-0-01-200 | 2202-01-053-0-01-200, 2202-02-001-0-09-422/423 | 4202-01-201-1-04-059/422/423 | 4202-01-201-1-04-059 | 4202-01-202-1-05-386 | 4202-01-201-1-04-436 | 4202-01-201-1-04-059 | 4202-01-201-1-07-200 | |
| 1 | ಬೆಂಗಳೂರು ಉತ್ತರ | 0.00 | 0.00 | 0.00 | 0.00 | 0.00 | 0.00 | 60.00 | 30.82 | **90.82** |
| 2 | ಬೆಂಗಳೂರು ದಕ್ಷಿಣ | 3.00 | 0.00 | 0.00 | 0.00 | 0.00 | 0.00 | 90.00 | 50.29 | **143.29** |
| 3 | ಬೆಂಗಳೂರು | 0.00 | 20.00 | 28.57 | 0.00 | 0.00 | 77.15 | 130.00 | 51.86 | **307.58** |
| 4 | ರಾಮನಗರ | 0.00 | 20.00 | 0.00 | 0.00 | 0.00 | 0.00 | 150.00 | 68.17 | **238.17** |
| 5 | ಕೋಲಾರ | 0.00 | 30.00 | 0.00 | 20.96 | 0.00 | 0.00 | 210.00 | 91.50 | **352.46** |
| 6 | ಚಿಕ್ಕಬಳ್ಳಾಪುರ | 42.00 | 25.00 | 73.62 | 0.00 | 71.66 | 92.49 | 220.00 | 75.56 | **600.33** |
| 7 | ತುಮಕೂರು | 183.50 | 35.00 | 0.00 | 0.00 | 98.79 | 814.95 | 250.00 | 100.10 | **1482.34** |
| 8 | ಮಧುಗಿರಿ | 0.00 | 20.00 | 44.46 | 0.00 | 44.10 | 116.60 | 140.00 | 65.72 | **430.88** |
| 9 | ಶಿವಮೊಗ್ಗ | 0.00 | 35.00 | 0.00 | 76.82 | 0.00 | 278.58 | 270.00 | 102.39 | **762.79** |
| 10 | ಚಿತ್ರದುರ್ಗ | 118.00 | 30.00 | 108.07 | 0.00 | 88.20 | 833.63 | 190.00 | 82.98 | **1450.88** |
| 11 | ದಾವಣಗೆರೆ | 28.00 | 35.00 | 245.87 | 0.00 | 159.86 | 151.64 | 220.00 | 69.23 | **909.60** |
| 12 | ಮೈಸೂರು | 15.00 | 55.00 | 102.77 | 0.00 | 0.00 | 1910.37 | 350.00 | 121.14 | **2554.28** |
| 13 | ಚಾಮರಾಜನಗರ | 0.00 | 20.00 | 0.00 | 0.00 | 0.00 | 280.73 | 170.00 | 46.33 | **517.06** |
| 14 | ಮಂಡ್ಯ | 122.50 | 35.00 | 0.00 | 0.00 | 0.00 | 185.33 | 230.00 | 106.78 | **679.61** |
| 15 | ಹಾಸನ | 0.00 | 35.00 | 97.22 | 0.00 | 0.00 | 211.04 | 270.00 | 134.18 | **747.44** |
| 16 | ಚಿಕ್ಕಮಗಳೂರು | 3.00 | 25.00 | 0.00 | 0.00 | 0.00 | 382.95 | 280.00 | 73.39 | **764.34** |
| 17 | ಕೊಡಗು | 0.00 | 10.00 | 0.00 | 0.00 | 0.00 | 0.00 | 160.00 | 24.33 | **194.33** |
| 18 | ದಕ್ಷಿಣ ಕನ್ನಡ | 0.00 | 40.00 | 70.97 | 0.00 | 0.00 | 0.00 | 270.00 | 72.80 | **453.77** |
| 19 | ಉಡುಪಿ | 12.00 | 25.00 | 0.00 | 39.38 | 0.00 | 85.33 | 150.00 | 46.15 | **357.86** |
| 20 | ಬೆಳಗಾವಿ | 0.00 | 40.00 | 0.00 | 0.00 | 0.00 | 1622.05 | 220.00 | 78.83 | **1960.88** |
| 21 | ಚಿಕ್ಕೋಡಿ | 3.00 | 50.00 | 99.59 | 45.00 | 165.38 | 3097.86 | 240.00 | 105.24 | **3806.07** |
| 22 | ಬಿಜಾಪುರ | 0.00 | 40.00 | 88.20 | 0.00 | 115.67 | 231.49 | 360.00 | 100.10 | **935.46** |
| 23 | ಬಾಗಲಕೋಟೆ | 3.00 | 35.00 | 57.72 | 0.00 | 91.14 | 685.64 | 270.00 | 89.94 | **1232.44** |
| 24 | ಧಾರವಾಡ | 0.00 | 35.00 | 73.62 | 220.99 | 33.07 | 1324.12 | 160.00 | 52.47 | **1899.27** |
| 25 | ಗದಗ | 4.00 | 20.00 | 0.00 | 0.00 | 0.00 | 953.98 | 210.00 | 48.77 | **1236.75** |
| 26 | ಹಾವೇರಿ | 0.00 | 30.00 | 92.17 | 112.86 | 44.10 | 752.33 | 220.00 | 73.90 | **1325.36** |
| 27 | ಉತ್ತರ ಕನ್ನಡ | 0.00 | 15.00 | 60.36 | 0.00 | 0.00 | 127.12 | 180.00 | 43.40 | **425.88** |
| 28 | ಶಿರಸಿ | 0.00 | 15.00 | 97.02 | 117.13 | 27.39 | 121.56 | 220.00 | 55.70 | **653.80** |
| 29 | ಗುಲ್ಬರ್ಗಾ | 0.00 | 0.00 | 0.00 | 0.00 | 0.00 | 1796.64 | 380.00 | 132.38 | **2309.02** |
| 30 | ಯಾದಗಿರಿ | 0.00 | 0.00 | 23.27 | 0.00 | 60.64 | 0.00 | 180.00 | 61.48 | **325.39** |
| 31 | ಬಳ್ಳಾರಿ | 60.00 | 0.00 | 0.00 | 0.00 | 0.00 | 1248.12 | 290.00 | 111.17 | **1709.29** |
| 32 | ರಾಯಚೂರು | 0.00 | 0.00 | 0.00 | 0.00 | 0.00 | 1226.71 | 260.00 | 102.40 | **1589.11** |
| 33 | ಕೊಪ್ಪಳ | 0.00 | 0.00 | 0.00 | 0.00 | 0.00 | 95.84 | 230.00 | 72.50 | **398.34** |
| 34 | ಬೀದರ್ | 0.00 | 0.00 | 0.00 | 0.00 | 0.00 | 45.75 | 270.00 | 83.00 | **398.75** |
| | ಒಟ್ಟು | 597.00 | 775.00 | 1363.50 | 633.14 | 1000.00 | 18750.00 | 7500.00 | 2625.00 | **33243.64** |

ಉಪ ನಿರ್ದೇಶಕರು(ಯೋಜನೆ)(ಪ್ರಭಾರ)

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 486

ಸದಸ್ಯರ ಹೆಸರು : ಶ್ರೀ ಸಂಜೀವ ಮಠಂದೂರ್ (ಪುತ್ತೂರು)

ಉತ್ತರಿಸಬೇಕಾದ ದಿನಾಂಕ : 16-12-2021

ಉತ್ತರಿಸುವ ಸಚಿವರು : ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

****

| | ಪ್ರಶ್ನೆ | ಉತ್ತರ |
|---|---|---|
| ಅ) | ಪುತ್ತೂರು ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ವಿಟ್ಲ, ಪುಣಚ, ತೇಪು ಗ್ರಾಮಗಳ ಮೂಲಕ ಉಡುಪಿ 400KV ವಿದ್ಯುತ್ ಲೈನ್ ಕರ್ನಾಟಕದಿಂದ ಕೇರಳಕ್ಕೆ ಹಾದುಹೋಗುತ್ತಿದ್ದು, ಈ ಯೋಜನೆಯಿಂದ ರೈತರ ಕೃಷಿಭೂಮಿಗೆ ತೊಂದರೆಯಾಗಲಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸ್ತಾಪಿತ 400 ಕೆ.ವಿ. ಉಡುಪಿ-ಕಾಸರಗೋಡು ಪ್ರಸರಣ ಮಾರ್ಗವನ್ನು ನಿರ್ಮಾಣ ಮಾಡಲು ಉಡುಪಿ-ಕಾಸರಗೋಡು ಟ್ರಾನ್ಸ್ ಮಿಷನ್ ಲಿಮಿಟೆಡ್ ರವರಿಗೆ ಆರ್.ಇ.ಸಿ. ಟ್ರಾನ್ಸ್ ಮಿಷನ್ ಪ್ರಾಜೆಕ್ಟ್ಸ್ ಕಂಪನಿ ಲಿಮಿಟೆಡ್, ಭಾರತ ಸರ್ಕಾರ ರವರು ವಹಿಸಿದ್ದು, ಸದರಿಯವರು ಈ ಮಾರ್ಗದ ಕಾಮಗಾರಿ ಕಾರ್ಯವನ್ನು Tariff based competitive bidding ಮುಖಾಂತರ ಮೆ: ಸ್ಟರ್ಲೈಟ್ ಗ್ರಿಡ್ ಲಿಮಿಟೆಡ್ ರವರಿಗೆ ವಹಿಸಲಾಗಿರುತ್ತದೆ.<br><br>ಈ ಕಾಮಗಾರಿಯನ್ನು ಕರ್ನಾಟಕ ಸರ್ಕಾರದ ಇಂಧನ ಇಲಾಖೆಯ ವತಿಯಿಂದ ನಿರ್ವಹಿಸುತ್ತಿಲ್ಲ. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಕೈಗೊಂಡಿರುವ ಕ್ರಮವೇನು? (ಪೂರ್ಣ ವಿವರ ನೀಡುವುದು) | |

ಸಂಖ್ಯೆ: ಎನರ್ಜಿ 283 ಪಿಪಿಎಂ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ
ಸಚಿವರು



# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 487 |
| ಮಾನ್ಯ ಸದಸ್ಯರ ಹೆಸರು | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 16-12-2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ಮೈಸೂರಿನಲ್ಲಿರುವ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ವಿಶ್ವವಿದ್ಯಾಲಯ ಪ್ರಸ್ತುತ ತಾತ್ಕಾಲಿಕ ಕಟ್ಟಡದಲ್ಲಿ ಕಾರ್ಯ ನಿರ್ವಹಿಸುತ್ತಿದ್ದು ಸ್ವಂತ ಕಟ್ಟಡ ನಿರ್ಮಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಇದ್ದಲ್ಲಿ, ಇಲ್ಲದಿದ್ದಲ್ಲಿ, ಕಾರಣ ನೀಡುವುದು? | ಮೈಸೂರು ನಗರದ ಸರ್ದಾರವಲ್ಲಭ ಬಾಯಿ ನಗರದಲ್ಲಿರುವ ಸಿ.ಎ. ನಿವೇಶನ ಸಂಖ್ಯೆ: 9ರಲ್ಲಿ ವಿಶ್ವವಿದ್ಯಾಲಯವು ತನ್ನ ಸ್ವಂತ ಆಡಳಿತ, ಶೈಕ್ಷಣಿಕ, ಸ್ನಾತಕೋತ್ತರ ಕೇಂದ್ರ ಸ್ಥಾಪನೆ, ವಿದ್ಯಾರ್ಥಿನಿಲಯ ಮತ್ತು ಸಭಾಂಗಣ ಕಟ್ಟಡಗಳನ್ನು ನಿರ್ಮಾಣ ಮಾಡುವ ಕುರಿತು ವಿಶ್ವವಿದ್ಯಾಲಯದಿಂದ ಪ್ರಸ್ತಾವನೆಯು ಸ್ವೀಕೃತವಾಗಿದ್ದು, ಸರ್ಕಾರದ ಪರಿಶೀಲನೆಯಲ್ಲಿದೆ. |

ಸಂಖ್ಯೆ: ಇಡಿ 340 ಯುಎನ್ಇ 2021

**(ಡಾ: ಅಶ್ವಥ್ ನಾರಾಯಣ ಸಿ.ಎನ್.)**
ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.



# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | | 488 |
| ಮಾನ್ಯ ಸದಸ್ಯರ ಹೆಸರು | | ಶ್ರೀ ತನ್ವೀರ್ ಸೇಠ್ (ನರಸಿಂಹರಾಜ) |
| ಉತ್ತರಿಸುವ ಸಚಿವರು | | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | | 16-12-2021 |
| **ಪ್ರಶ್ನೆ** | | **ಉತ್ತರ** |
| (ಅ) | ಮೈಸೂರಿನಲ್ಲಿರುವ ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ವಿಶ್ವವಿದ್ಯಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಬೋಧಕ/ ಬೋಧಕೇತರ ಸಿಬ್ಬಂದಿಗಳ (ಖಾಯಂ/ ಗುತ್ತಿಗೆ ಆಧಾರ/ಸಂಚಿತ ವೇತನ) ಈ ಹುದ್ದೆಗಳಿಗೆ ನೇಮಕಾತಿ ಮಾಡಲು ಸರ್ಕಾರ ನೇಮಕಾತಿ ನಿಯಮಾವಳಿಗಳನ್ನು ರೂಪಿಸಿದೆಯೇ; (ಹುದ್ದೆವಾರು ವಿವರ ನೀಡುವುದು) | ಪ್ರಸ್ತುತ, ಕರ್ನಾಟಕ ರಾಜ್ಯ ಡಾ: ಗಂಗೂಬಾಯಿ ಹಾನಗಲ್ ಸಂಗೀತ ಮತ್ತು ಪ್ರದರ್ಶಕ ಕಲೆಗಳ ವಿಶ್ವವಿದ್ಯಾಲಯವು ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಖಾಯಂ ಮಾಡಲು ವೃಂದ ಮತ್ತು ನೇಮಕಾತಿ ಪರಿನಿಯಮಾವಳಿಯನ್ನು ರಚಿಸಿ ಸರ್ಕಾರದ ಅನುಮೋದನೆಗಾಗಿ ಪ್ರಸ್ತಾವನೆ ಸಲ್ಲಿಸಿದ್ದು, ಪ್ರಸ್ತುತ ಸದರಿ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಪರಿಶೀಲನೆಯಲ್ಲಿರುತ್ತದೆ. |
| (ಆ) | ಇದ್ದಲ್ಲಿ, ಹುದ್ದೆವಾರು ಮಾಹಿತಿಯನ್ನು ನೀಡುವುದು; ಇಲ್ಲದಿದ್ದಲ್ಲಿ, ಕಾರಣ ನೀಡುವುದು? | ಅನ್ವಯಿಸುವುದಿಲ್ಲ. |

ಸಂಖ್ಯೆ: ಇಡಿ 339 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ & ಬಿಟಿ,
ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು.

ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 489
ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)
ಉತ್ತರಿಸುವ ದಿನಾಂಕ : 16.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದಿಂದ ನರಸಿಂಹರಾಜ ವಿಧಾನ ಸಭಾ ಕ್ಷೇತ್ರ, ರಾಜೀವ ನಗರ ಬಡಾವಣೆಯಲ್ಲಿ ಸಾರ್ವಜನಿಕ ಗ್ರಂಥಾಲಯ ಕಟ್ಟಡ ನಿರ್ಮಿಸಲು ಈಗಾಗಲೇ ಮಂಜೂರು ಮಾಡಲಾಗಿರುವ ನಿವೇಶನದಲ್ಲಿ ಪಾರಂಪರಿಕ ವಿನ್ಯಾಸದಲ್ಲಿ ಕಟ್ಟಡ ನಿರ್ಮಿಸಲು ಇಲಾಖೆಯಿಂದ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಕೆಯಾಗಿದೆಯೇ; ಹಾಗಿದ್ದಲ್ಲಿ ಮಾಹಿತಿ ನೀಡುವುದು | ಹೌದು<br><br>ಸರ್ಕಾರದ ಸುತ್ತೋಲೆ ಸಂಖ್ಯೆ: ಆಇ 03 ಬಿಇಎಂ 2020, ದಿನಾಂಕ: 06.07.2020 ರಲ್ಲಿ ಆರ್ಥಿಕ ನಿರ್ಬಂದತೆ ಇದ್ದು, ರಾಜ್ಯದಲ್ಲಿ ಕೋವಿಡ್-19 ನಿಂದ ಉಂಟಾದ ಪರಿಸ್ಥಿತಿಯನ್ನು ನಿಭಾಯಿಸಿ ಆರ್ಥಿಕ ಸ್ಥಿತಿಯನ್ನು ಸುಸ್ಥಿತಿಗೆ ತರುವ ನಿಟ್ಟಿನಲ್ಲಿ ಸಂಪನ್ಮೂಲವನ್ನು ಕ್ರೋಢೀಕರಿಸುವುದು ಅಗತ್ಯವಾಗಿದೆ. |
| ಆ | ಪ್ರಸ್ತಾವನೆಗೆ ಮಂಜೂರಾತಿ ನೀಡಲಾಗಿದೆಯೇ; ಮಂಜೂರಾತಿ ನೀಡಿದ್ದರೆ ಪೂರ್ಣ ಮಾಹಿತಿ ನೀಡುವುದು? | ಈ ಹಿನ್ನೆಲೆಯಲ್ಲಿ 2022-23ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗುವ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ ಹಂತ ಹಂತವಾಗಿ ಸದರಿ ಕಟ್ಟಡವು ಸೇರಿದಂತೆ ರಾಜ್ಯದ ಇನ್ನುಳಿದ ಗ್ರಂಥಾಲಯ ಕಟ್ಟಡ ನಿರ್ಮಾಣ ಹಾಗೂ ಕಟ್ಟಡ ದುರಸ್ಥಿ ಕಾಮಗಾರಿ ಕೈಗೊಳ್ಳಲು ಕ್ರಮವಹಿಸಲಾಗುವುದು. |

ಸಂಖ್ಯೆ:ಇಡಿ 40 ಎಲ್‌ಐಬಿ 2021

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 490**
**ಮಾನ್ಯ ಸದಸ್ಯರ ಹೆಸರು : ಶ್ರೀ ತನ್ವೀರ್ ಸೇಠ್ (ನರಸಿಂಹರಾಜ)**
**ಉತ್ತರಿಸಬೇಕಾದ ದಿನಾಂಕ : 16-12-2021**
**ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು**

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ನರಸಿಂಹರಾಜ ವಿಧಾನಸಭಾ ಕ್ಷೇತ್ರ ವ್ಯಾಪ್ತಿ ಅಜೀಜ್ ಸೇಠ್ ಜೋಡಿ ರಸ್ತೆಯಲ್ಲಿರುವ ಬೀಡಿ ಕಾರ್ಮಿಕರ ಆಸ್ಪತ್ರೆಯನ್ನು ಕೇಂದ್ರ ಕಾರ್ಮಿಕ ಇಲಾಖೆಯಿಂದ ಪಡೆದು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಅಥವಾ ವೈದ್ಯಕೀಯ ಶಿಕ್ಷಣ ಇಲಾಖೆ ವಶಕ್ಕೆ ಪಡೆದು ನಿರ್ವಹಣೆ ಮಾಡುವ ಬಗ್ಗೆ ಇಲಾಖೆಯಿಂದ ಪ್ರಸ್ತಾವನೆ ಸರ್ಕಾರಕ್ಕೆ ಸಲ್ಲಿಕೆಯಾಗಿದೆಯೇ; | ಇಲ್ಲ. |
| ಆ | ಹಾಗಿದ್ದಲ್ಲಿ, ಪೂರ್ಣ ಮಾಹಿತಿಯನ್ನು ನೀಡುವುದು; ಇಲ್ಲದಿದ್ದಲ್ಲಿ ಕಾರಣ ನೀಡುವುದು? | ಉದ್ಭವಿಸುವುದಿಲ್ಲ. |

**ಸಂಖ್ಯೆ: ಆಕುಕ 490 ಚುರಪ್ರ 2021**

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ** : 491

**ಮಾನ್ಯ ಸದಸ್ಯರ ಹೆಸರು** : ಶ್ರೀ ಸಿದ್ದು ಸವದಿ (ತೇರದಾಳ)

**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

**ಉತ್ತರಿಸುವ ದಿನಾಂಕ** : 16-12-2021

*******

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬನಹಟ್ಟಿ ನಗರದಲ್ಲಿರುವ ಹಳೆಯಲ್ಲಮ್ಮ ದೇವಸ್ಥಾನಕ್ಕೆ 2018-19ನೇ ಸಾಲಿನಲ್ಲಿ ಯಾತ್ರಾನಿವಾಸ ಮತ್ತು ಮೂಲಭೂತ ಸೌಲಭ್ಯ ಒದಗಿಸಲು ರೂ.20 ಲಕ್ಷ ಮಂಜೂರಾಗಿದ್ದು, ಇದುವರೆಗೂ ಕಾಮಗಾರಿಯನ್ನು ಪ್ರಾರಂಭ ಮಾಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ.<br>ಸರ್ಕಾರದ ಆದೇಶ ಸಂಖ್ಯೆ: ಟಿಓಆರ್/35/ಟಿಡಿಪಿ/2019, ದಿನಾಂಕ: 30/09/2019ರ ಆದೇಶದ ಕ್ರಮ ಸಂಖ್ಯೆ: 30ರಲ್ಲಿ 2018-19ನೇ ಸಾಲಿನಲ್ಲಿ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಬಳಿ ಯಾತ್ರಿನಿವಾಸ, ಕುಡಿಯುವ ನೀರು, ರಸ್ತೆ ನಿರ್ಮಾಣ, ಗಾರ್ಡನ್‌ಗಳ ನವೀಕರಣ ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಗಳನ್ನು ರೂ.15.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ. ಅದರಂತೆ, ಪ್ರವಾಸೋದ್ಯಮ ನಿರ್ದೇಶಕರು ದಿನಾಂಕ:19/11/2019ರ ಅಧಿಕೃತ ಜ್ಞಾಪನಾದಲ್ಲಿ ಸದರಿ ಕಾಮಗಾರಿ ಪ್ರಾರಂಭಿಸಲು ಮೊದಲ ಕಂತಾಗಿ ರೂ.5.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ನಿರ್ಮಿತಿ ಕೇಂದ್ರ, ಬಾಗಲಕೋಟೆರವರಿಗೆ ಬಿಡುಗಡೆ ಮಾಡಿರುತ್ತಾರೆ.<br>ತಿದ್ದುಪಡಿ ಆದೇಶ ಸಂಖ್ಯೆ: ಟಿಓಆರ್/180/ಟಿಡಿಪಿ/2019, ದಿನಾಂಕ: 28/11/2019ರಲ್ಲಿ ಸದರಿ ಕಾಮಗಾರಿಯನ್ನು ರೂ.15.00 ಲಕ್ಷಗಳ ಬದಲಾಗಿ ರೂ.20.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಪರಿಷ್ಕೃತ ಅನುಮೋದನೆ ನೀಡಲಾಗಿದೆ. ಅದರಂತೆ, ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಬಾಗಲಕೋಟೆರವರಿಂದ ಆಡಳಿತಾತ್ಮಕ ಅನುಮೋದನೆ ಪಡೆದು, ಕಾಮಗಾರಿಯನ್ನು ಪ್ರಾರಂಭಿಸಲು ದಿನಾಂಕ: 27/12/2019ರಂದು ಅನುಷ್ಠಾನ ಸಂಸ್ಥೆಗೆ ತಿಳಿಸಲಾಗಿದೆ.<br>ಮಾನ್ಯ ಶಾಸಕರು, ತೇರದಾಳ ಮತಕ್ಷೇತ್ರರವರು ಸದರಿ ಅನುದಾನದಲ್ಲಿ ದೇವಸ್ಥಾನದ ಮೂಲಭೂತ ಸೌಕರ್ಯದಲ್ಲಿ ಬರುವ ವಾಹನ ನಿಲುಗಡೆಗೆ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವ ಕಾಮಗಾರಿಗೆ ಅನುಮೋದನೆ ನೀಡಬೇಕೆಂದು ದಿನಾಂಕ: 08/12/2020ರ ಪತ್ರದಲ್ಲಿ ಕೋರಿದ್ದು, ಅದರಂತೆ, ಸರ್ಕಾರದ ಪತ್ರ ಸಂಖ್ಯೆ: ಟಿಓಆರ್ 03 ಟಿಡಿಪಿ 2021, ದಿನಾಂಕ: 28-01-2021ರಲ್ಲಿ ಬಾಗಲಕೋಟೆ ಜಿಲ್ಲೆಯ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಬಳಿ ಯಾತ್ರಿನಿವಾಸ, ಕುಡಿಯುವ ನೀರು, ರಸ್ತೆ ನಿರ್ಮಾಣ, ಗಾರ್ಡನ್ ಗಳ ನವೀಕರಣ ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿ ಹಾಗೂ ವಾಹನ ನಿಲುಗಡೆ ವ್ಯವಸ್ಥೆಯನ್ನು ಕಲ್ಪಿಸುವ ಕಾಮಗಾರಿಯನ್ನು ಒಳಗೊಂಡಂತೆ ರೂ.20.00 ಲಕ್ಷಗಳ ವೆಚ್ಚದಲ್ಲಿ ಕೈಗೊಳ್ಳುವಂತೆ ಪ್ರವಾಸೋದ್ಯಮ ನಿರ್ದೇಶಕರಿಗೆ ತಿಳಿಸಲಾಗಿದೆ. ಅದರನ್ವಯ ಕಾಮಗಾರಿ ಕೈಗೊಳ್ಳುವಂತೆ ಜಿಲ್ಲಾಧಿಕಾರಿಗಳು ಹಾಗೂ ಅಧ್ಯಕ್ಷರು, ಜಿಲ್ಲಾ ಪ್ರವಾಸೋದ್ಯಮ ಅಭಿವೃದ್ಧಿ ಸಮಿತಿ, ಬಾಗಲಕೋಟೆರವರಿಗೆ ದಿನಾಂಕ: 17/02/2021ರ ಪತ್ರದಲ್ಲಿ ಕಾಮಗಾರಿಯನ್ನು ಶೀಘ್ರವಾಗಿ ಕೈಗೊಳ್ಳುವಂತೆ ತಿಳಿಸಲಾಗಿರುತ್ತದೆ. |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಆ) | ಬಂದಿದ್ದಲ್ಲಿ, ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು ಹಾಗೂ ಯಾವಾಗ ಪೂರ್ಣಗೊಳಿಸಲಾಗುವುದು; | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆರವರು ದಿನಾಂಕ: 08-11-2021ರ ಪತ್ರದಲ್ಲಿ ಉಪ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ, ವಿಜಯಪುರರವರು ದಿನಾಂಕ: 02-07-2021 ಹಾಗೂ 28-09-2021ರ ಪತ್ರಗಳಲ್ಲಿ ಬಾಗಲಕೋಟೆ ಜಿಲ್ಲೆಯ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಆವರಣದಲ್ಲಿ ಯಾತ್ರಿನಿವಾಸ, ಕುಡಿಯುವ ನೀರು, ರಸ್ತೆ ನಿರ್ಮಾಣ, ಗಾರ್ಡನ್‌ಗಳ ನವೀಕರಣ ಹಾಗೂ ಮೂಲಭೂತ ಸೌಕರ್ಯಗಳ ಕಾಮಗಾರಿಯಲ್ಲಿ ವಾಹನ ನಿಲುಗಡೆಗೆ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವ ಕಾಮಗಾರಿಯನ್ನು ರೂ.20.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸಾಧ್ಯವಾಗದೆ ಇರುವ ಕಾರಣ ಈ ಕಾಮಗಾರಿಗಳ ಬದಲಾಗಿ ರೂ.20.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಬಾಗಲಕೋಟೆ ಜಿಲ್ಲೆಯ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಆವರಣದಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಗಳಲ್ಲಿ ಚೈನ್ ಲಿಂಕ್, ಆಸನಗಳ ವ್ಯವಸ್ಥೆ ಹಾಗೂ ವಾಹನ ನಿಲುಗಡೆ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವ ಕಾಮಗಾರಿಯನ್ನು ಕೈಗೊಳ್ಳಲು ಅನುಮೋದನೆ ನೀಡಬೇಕೆಂದು ಕೋರಿರುವ ಬಗ್ಗೆ ಸೂಕ್ತ ನಿರ್ದೇಶನವನ್ನು ಕೋರಿರುತ್ತಾರೆ.<br><br>ಅದರಂತೆ, ಸರ್ಕಾರದ ಆದೇಶ ಸಂಖ್ಯೆ: ಟಿಓಆರ್ 03 ಟಿಡಿಪಿ 2021, ದಿನಾಂಕ: 06-12-2021ರ ಆದೇಶದಲ್ಲಿ ಸರ್ಕಾರದ ಪತ್ರ ಸಂಖ್ಯೆ: ಟಿಓಆರ್ 03 ಟಿಡಿಪಿ 2021, ದಿನಾಂಕ: 28-01-2021ರಲ್ಲಿ ರೂ.20.00 ಲಕ್ಷಗಳ ವೆಚ್ಚದಲ್ಲಿ ಬಾಗಲಕೋಟೆ ಜಿಲ್ಲೆಯ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಬಳಿ ಯಾತ್ರಿನಿವಾಸ, ಕುಡಿಯುವ ನೀರು, ರಸ್ತೆ ನಿರ್ಮಾಣ, ಗಾರ್ಡನ್ ಗಳ ನವೀಕರಣ ಹಾಗೂ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿ ಹಾಗೂ ವಾಹನ ನಿಲುಗಡೆ ವ್ಯವಸ್ಥೆಯನ್ನು ಕಲ್ಪಿಸುವ ಕಾಮಗಾರಿಯನ್ನು ಕೈಗೊಳ್ಳುವಂತೆ ತಿಳಿಸಿರುವುದನ್ನು ಮಾರ್ಪಡಿಸಿ ಬಾಗಲಕೋಟೆ ಜಿಲ್ಲೆಯ ಬನಹಟ್ಟಿ ನಗರದ ಹಳೆಯಲ್ಲಮ್ಮ ದೇವಸ್ಥಾನದ ಆವರಣದಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಕಾಮಗಾರಿಗಳಲ್ಲಿ ಚೈನ್ ಲಿಂಕ್, ಆಸನಗಳ ವ್ಯವಸ್ಥೆ ಹಾಗೂ ವಾಹನ ನಿಲುಗಡೆ ಪಾರ್ಕಿಂಗ್ ವ್ಯವಸ್ಥೆ ಕಲ್ಪಿಸುವ ಕಾಮಗಾರಿಯನ್ನು ರೂ. 20.00 ಲಕ್ಷಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಸರ್ಕಾರದ ಪರಿಷ್ಕೃತ ಮಂಜೂರಾತಿ ನೀಡಲಾಗಿದೆ.<br><br>ಸದರಿ ಕಾಮಗಾರಿಗೆ ಮೇಲ್ಕಂಡಂತೆ ವಿವರಿಸಿರುವಂತೆ ವಿವಿಧ ದಿನಾಂಕಗಳಂದು ಸಾಕಷ್ಟು ಬಾರಿ ಪರಿಷ್ಕೃತ ಆದೇಶಗಳನ್ನು ಹೊರಡಿಸಿರುವುದರಿಂದ ಸದರಿ ಕಾಮಗಾರಿಯನ್ನು ಕೈಗೊಳ್ಳಲು ವಿಳಂಬವಾಗಿರುತ್ತದೆ.<br><br>ಪ್ರಸ್ತುತ, ಸರ್ಕಾರದ ಆದೇಶ ಸಂಖ್ಯೆ: ಟಿಓಆರ್ 03 ಟಿಡಿಪಿ 2021, ದಿನಾಂಕ: 06-12-2021ರ ಆದೇಶದಲ್ಲಿ ಪರಿಷ್ಕೃತ ಆದೇಶವನ್ನು ಹೊರಡಿಸಿದ್ದು, ಸದರಿ ಕಾಮಗಾರಿಯನ್ನು ಶೀಘ್ರವಾಗಿ ಪ್ರಾರಂಭಿಸಿ ಪೂರ್ಣಗೊಳಿಸಲಾಗುವುದು. |
| ಇ) | ಕಾಮಗಾರಿ ಇಷ್ಟೊಂದು ವಿಳಂಬವಾಗಲು ಕಾರಣವೇನು? (ಸಂಪೂರ್ಣ ಮಾಹಿತಿ ನೀಡುವುದು) | |

ಟಿಓಆರ್ 316 ಟಿಡಿವಿ 2021

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು
ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 492 |
| ಸದಸ್ಯರ ಹೆಸರು | : | ಶ್ರೀ ಸಿದ್ದು ಸವದಿ (ತೇರದಾಳ) |
| ಉತ್ತರಿಸಬೇಕಾದ ದಿನಾಂಕ | : | 16.12.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | 2019-20ನೇ ಸಾಲಿನಿಂದ ಇಲ್ಲಿಯವರೆಗೆ ಪ್ರವಾಹದಿಂದ ಹಾಳಾದ ಶಾಲಾ ಕೊಠಡಿಗಳೆಷ್ಟು; (ತೇರದಾಳ ಮತ ಕ್ಷೇತ್ರದ ಆಯಾ ಗ್ರಾಮವಾರು ಸಂಪೂರ್ಣ ಮಾಹಿತಿಯನ್ನು ನೀಡುವುದು) | ತೇರದಾಳ ಮತಕ್ಷೇತ್ರದ ವ್ಯಾಪ್ತಿಯಲ್ಲಿ 2019-20ನೇ ಸಾಲಿನಲ್ಲಿ ಉಂಟಾದ ಪ್ರವಾಹದಲ್ಲಿ ಹಾಳಾದ ಶಾಲಾ ಕೊಠಡಿಗಳ ಸಂಖ್ಯೆ: 54<br>ಶಾಲೆಗಳ ಪಟ್ಟಿಯನ್ನು ಪ್ರತ್ಯೇಕ **ಅನುಬಂಧ-1** ರಲ್ಲಿ ಸಲ್ಲಿಸಿದೆ. |

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ |
|---|---|---|
| 2019-20 | 24 | 54 |
| 2020-21 | 0 | 0 |
| 2021-22 | 0 | 0 |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಆ) | ಸಂಪೂರ್ಣವಾಗಿ ಹಾಳಾದ ಶಾಲೆಗಳೆಷ್ಟು ಮತ್ತು ಭಾಗಶಃ ಹಾಳಾದ ಶಾಲೆಗಳೆಷ್ಟು; ಇಲ್ಲಿಯವರೆಗೆ ಅವುಗಳಿಗೆ ಬಿಡುಗಡೆಯಾದ ಅನುದಾನವೆಷ್ಟು; | ತೇರದಾಳ ಮತಕ್ಷೇತ್ರದಲ್ಲಿನ ಒಟ್ಟು 24 ಶಾಲೆಗಳ ಒಟ್ಟು 54 ಕೊಠಡಿಗಳು ಪ್ರವಾಹದಿಂದ ಹಾಳಾಗಿದ್ದು, ವಿವರ ಈ ಕೆಳಗಿನಂತಿದೆ. |

| ವರ್ಷ | ಭಾಗಶಃ ಹಾಳಾದ ಸ.ಪ್ರಾಥಮಿಕ ಶಾಲೆ | | | ಸಂಪೂರ್ಣ ಹಾಳಾದ ಸ.ಪ್ರಾಥಮಿಕ ಶಾಲೆ | | |
|---|---|---|---|---|---|---|
| | ಶಾಲೆ | ಕೊಠಡಿ | ಅನುದಾನ | ಶಾಲೆ | ಕೊಠಡಿ | ಒದಗಿಸಲಾದ ಅನುದಾನ |
| 2019-20 | 7 | 13 | 0 | 15 | 36 | ಆರ್.ಐ.ಡಿ.ಎಫ್-25 ರಡಿ 519.40 ಲಕ್ಷಗಳು |
| 2020-21 | ಯಾವುದೇ ಶಾಲಾ ಕೊಠಡಿ ಹಾಳಾಗಿರುವುದಿಲ್ಲ. | | | | | |
| 2021-22 | ಯಾವುದೇ ಶಾಲಾ ಕೊಠಡಿ ಹಾಳಾಗಿರುವುದಿಲ್ಲ. | | | | | |

| ವರ್ಷ | ಭಾಗಶಃ ಹಾಳಾದ ಸ.ಪ್ರೌಢ ಶಾಲೆ | | | ಸಂಪೂರ್ಣ ಹಾಳಾದ ಸ.ಪ್ರೌಢ ಶಾಲೆ | | |
|---|---|---|---|---|---|---|
| | ಶಾಲೆ | ಕೊಠಡಿ | ಅನುದಾನ | ಶಾಲೆ | ಕೊಠಡಿ | ಒದಗಿಸಲಾದ ಅನುದಾನ |
| 2019-20 | 0 | 0 | 0 | 02 | 05 | ಆರ್.ಐ.ಡಿ.ಎಫ್-25 ರಡಿ 78.75 ಲಕ್ಷಗಳು |
| 2020-21 | ಯಾವುದೇ ಶಾಲಾ ಕೊಠಡಿ ಹಾಳಾಗಿರುವುದಿಲ್ಲ. | | | | | |
| 2021-22 | ಯಾವುದೇ ಶಾಲಾ ಕೊಠಡಿ ಹಾಳಾಗಿರುವುದಿಲ್ಲ. | | | | | |

| | | |
|---|---|---|
| ಇ) | ಸಂಪೂರ್ಣ ಹಾಳಾದ ಶಾಲೆಗಳನ್ನು ನಿರ್ಮಾಣ ಮಾಡುವ ಕಾರ್ಯವನ್ನು ಯಾವ ಏಜೆನ್ಸಿಗೆ ವಹಿಸಲಾಗಿದೆ. | ಈ ಎಲ್ಲಾ ಕಾಮಗಾರಿಗಳನ್ನು ಲೋಕೋಪಯೋಗಿ ಇಲಾಖೆಗೆ ವಹಿಸಲಾಗಿದೆ. |
| ಈ) | ತೇರದಾಳ ಮತಕ್ಷೇತ್ರದ ವ್ಯಾಪ್ತಿಯಲ್ಲಿ ಢವಳೇಶ್ವರ ಹಾಗೂ ಹಿಪ್ಪರಗಿ ಗ್ರಾಮದ ಶಾಲೆ ಪ್ರವಾಹದಿಂದ ಸಂಪೂರ್ಣ ಹಾಳಾಗಿದ್ದು, ಅದರ ನಿರ್ಮಾಣ ಕಾಮಗಾರಿ ಯಾರಿಗೆ ವಹಿಸಲಾಗಿದೆ; ಇದುವರೆಗೆ ಕಟ್ಟಡ ನಿರ್ಮಾಣ ಮಾಡದಿರಲು ಕಾರಣವೇನು; ಯಾವಾಗ ಪ್ರಾರಂಭಿಸಲಾಗುವುದು; ಅಲ್ಲಿಯವರೆಗೆ ಮಕ್ಕಳ ವಿದ್ಯಾಭ್ಯಾಸಕ್ಕೆ ಎಲ್ಲಿ ವ್ಯವಸ್ಥೆ ಮಾಡಲಾಗುವುದು? | ಢವಳೇಶ್ವರ ಗ್ರಾಮದ ಶಾಲೆಯನ್ನು ವಿಪ್ರೋ ಕಂಪನಿ ಬೆಂಗಳೂರು ಇವರು ದತ್ತು ಪಡೆದು CSR ನಿಧಿಯಿಂದ ಸಂಪೂರ್ಣ ಕಟ್ಟಡ ನಿರ್ಮಿಸಿ ಕೊಡುವುದಾಗಿ ತಿಳಿಸಿದ್ದರಿಂದ ಸದರಿ ಕಾರ್ಯವು ವಿಳಂಬವಾಗಿರುತ್ತದೆ. ಈ ಹಿನ್ನೆಲೆಯಲ್ಲಿ ರಾಜ್ಯ ಸರ್ಕಾರದ ಬಂಡವಾಳ ವೆಚ್ಚ ಯೋಜನೆಗುಡಿಯಲ್ಲಿ ಆಯವ್ಯಯದಲ್ಲಿ ಒದಗಿಸಲಾದ ಅನುದಾನ ಹಾಗೂ ಅಗತ್ಯತೆಗೆ ಅನುಗುಣವಾಗಿ ಢವಳೇಶ್ವರ ಹಾಗೂ ಹಿಪ್ಪರಗಿ ಗ್ರಾಮದ ಶಾಲೆಗಳ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಅನುದಾನ ಒದಗಿಸಲು ಕ್ರಮವಹಿಲಾಗುತ್ತಿದೆ.<br><br>ಪ್ರಸ್ತುತ, ಮಕ್ಕಳ ವಿದ್ಯಾಭ್ಯಾಸಕ್ಕೆ ಅದೇ ಊರಿನಲ್ಲಿನ ಪ್ರೌಢ ಶಾಲೆಗಳಲ್ಲಿ ವ್ಯವಸ್ಥೆ ಮಾಡಲಾಗಿದೆ. |

**ಇಪಿ: 290 ಯೋಸಕ 2021**

(ಬಿ.ಸಿ.ನಾಗೇಶ್)
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

| ಅನುಬಂಧ-1 | | | | |
|---|---|---|---|---|
| **RAIN AFFECTED PRIMARY SCHOOL BUILDINGS/CLASS ROOMS REQUIRING DEMOLITION AND RECONSTRUCTION-2019-20** | | | | |
| **TERDAL** | | | | |
| **S. No** | **DISE CODE** | **NAME OF THE SCHOOL** | **COMPLEATLY DAMAGED ROOMS** | **PARTIAL DAMAGED** |
| 1 | 29021112801 | LOWER PRIMARY SCHOOL MAMADAPUR TOTA MAHALINGAPUR | 0 | 2 |
| 2 | 29021103904 | HIGHER PRIMARY SCHOOL TOTA NO 1 KESARAGOPPA | 1 | 0 |
| 3 | 29021103901 | HIGHER PRIMARY SCHOOL KESARGOPPA | 3 | 0 |
| 4 | 29021106803 | GOVT- HIGHER PRIMARY SCHOOL SAIDAPUR NO 1 | 0 | 1 |
| 5 | 29021100901 | HIGHER PRIMARY SCHOOL BISANAL | 2 | 0 |
| 6 | 29021113201 | HIGHER PRIMARY SCHOOL BUDNI PD | 5 | 0 |
| 7 | 29021102306 | LOWER PRIMARY SCHOOL KHAJIBAL TOTA DHAVALESHWAR | 0 | 2 |
| 8 | 29021102304 | LOWER PRIMARY SCHOOL MORABAD TOTA DHAVALESHWAR | 0 | 3 |
| 9 | 29021113102 | HIGHER PRIMARY SCHOOL URDU KENGERIMADDI | 0 | 2 |
| 10 | 29020912201 | GOVT.HIGHER PRIMARY SCHOOL RAMPUR | 2 | 0 |
| 11 | 29020902601 | GOVT.HIGHER PRIMARY SCHOOL JAGADAL | 5 | 0 |
| 12 | 29020912401 | GOVT.HIGHER PRIMARY SCHOOL , HOSUR | 0 | 1 |
| 13 | 29020912101 | GOVT.UHIGHER PRIMARY SCHOOL RAMPUR | 1 | 0 |
| 14 | 29020905803 | HIGHER PRIMARY SCHOOL SASALATTI TOTA NO-2 | 2 | 0 |
| 15 | 29020913001 | HIGHER PRIMARY SCHOOL KUMBAR ONI RABAKVI | 1 | 0 |
| 16 | 29020900401 | GOVT.HIGHER PRIMARY SCHOOL ASANGI | 4 | 0 |
| 17 | 29020904903 | GOVT.HIGHER PRIMARY SCHOOL GANESH TOT, MADHURKHANDI | 0 | 2 |
| 18 | 29020911201 | GOVT.HIGHER PRIMARY SCHOOL BANAHATTI. TOT | 2 | 0 |
| 19 | 20920910805 | GOVT.HIGHER PRIMARY SCHOOL . SADASHIVNAGAR, BANHATTI | 3 | 0 |
| 20 | 29020911101 | GOVT.HIGHER PRIMARY SCHOOL LAXMINAGAR,BANHATTI | 1 | 0 |
| 21 | 29020912801 | GOVT. KB MODLE PRIMARY SCHOOL , RABKAVI | 2 | 0 |
| 22 | 29020901903 | GOVT.HIGHER PRIMARY SCHOOL HANAGANDI TOT NO - 1 | 2 | 0 |
| | | **Total** | **36** | **13** |

**RAIN AFFECTED HIGH SCHOOL BUILDINGS/CLASS ROOMS REQUIRING DEMOLITION AND RECONSTRUCTION-2019-20**

| **Sl.no** | **DISE Code.** | **Name and address of School** | **No. of class rooms requiring demolition and reconstruction** | **Remark** |
|---|---|---|---|---|
| **TERDAL** | | | | |
| 1 | 29020911003 | GOVT.JR.COLLEGE,BANHATTI | 3 | |
| 2 | 29020910301 | GOVT URDU HS RABAKAVI | 2 | |
| | | **TOTAL** | **5** | |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 493
ಸದಸ್ಯರ ಹೆಸರು : ಶ್ರೀ ಸಿದ್ದುಸವದಿ (ತೇರದಾಳ)
ಉತ್ತರಿಸುವ ದಿನಾಂಕ : 16-12-2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ತೇರದಾಳ ಕ್ಷೇತ್ರದಲ್ಲಿರುವ ಹಿಪ್ಪರಗಿ ಗ್ರಾಮದಲ್ಲಿ ಪದವಿ ಪೂರ್ವ ಕಾಲೇಜು ಯಾವಾಗ ಪ್ರಾರಂಭವಾಗಿದೆ; ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳ ಸಂಖ್ಯೆ ಎಷ್ಟು; (ಪೂರ್ಣ ಮಾಹಿತಿ ಒದಗಿಸುವುದು) | ಇಡಿ 643 ಎಸ್‌ಹೆಚ್‌ಹೆಚ್ 2012, ದಿನಾಂಕ:01-07-2011ರ ಸರ್ಕಾರದ ಆದೇಶದನ್ವಯ ತೇರದಾಳ ಕ್ಷೇತ್ರದ ಹಿಪ್ಪರಗಿ ಗ್ರಾಮದಲ್ಲಿ ಸರ್ಕಾರಿ ಪದವಿ ಪೂರ್ವ ಕಾಲೇಜು ಪ್ರಾರಂಭವಾಗಿರುತ್ತದೆ.<br><br>ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರ ಆದೇಶ ಸಂಖ್ಯೆ:ಪಪೂಶಿಇ/ಸಿ-3/ಬಡ್ತಿ-02/2014-15 ದಿನಾಂಕ:21-05-2015ರನ್ವಯ ಸರ್ಕಾರಿ ಪದವಿ ಪೂರ್ವ ಕಾಲೇಜು ತುಂಗಳದಿಂದ ರಾಜ್ಯಶಾಸ್ತ್ರ ವಿಷಯದ ಹುದ್ದೆಯನ್ನು ಸ್ಥಳಾಂತರಿಸಲಾಗಿದ್ದು, ರಾಜ್ಯಶಾಸ್ತ್ರ ವಿಷಯದ ಉಪನ್ಯಾಸಕರು ಕಾರ್ಯ ನಿರ್ವಹಿಸುತ್ತಿದ್ದಾರೆ.<br><br>ಸದರಿ ಕಾಲೇಜಿಗೆ ಯಾವುದೇ ಬೋಧಕೇತರ ಹುದ್ದೆ ಮಂಜೂರು ಆಗಿರುವುದಿಲ್ಲ. ಕನಿಷ್ಠ ಬೋಧಕೇತರ ಹುದ್ದೆಗಳಿಲ್ಲದ ಕಾಲೇಜುಗಳನ್ನು ಗುರುತಿಸುವ ಪ್ರಕ್ರಿಯೆ ಚಾಲನೆಯಲ್ಲಿದ್ದು, ಪ್ರಕ್ರಿಯ ಪೂರ್ಣಗೊಂಡ ಕೂಡಲೇ ಹುದ್ದೆಯನ್ನು ಸ್ಥಳಾಂತರ ಮಾಡಲು ಕ್ರಮವಹಿಸಲಾಗುವುದು.<br><br>ನಿರ್ದೇಶಕರು, ಪದವಿ ಪೂರ್ವ ಶಿಕ್ಷಣ ಇಲಾಖೆರವರ ಆದೇಶ ಸಂಖ್ಯೆ: ಪಪೂಶಿಇ/ಸಿ-2/ ಉ.ನೇ/ಹುಮಂ.09/ 2015-16, ದಿನಾಂಕ:04-12-2020ರನ್ವಯ ಪ್ರಾಂಶುಪಾಲರು, ಆಂಗ್ಲಭಾಷೆ, ಕನ್ನಡ ಭಾಷೆ, ಇತಿಹಾಸ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ವಿಷಯದ 05 ಉಪನ್ಯಾಸಕರ ಹುದ್ದೆಗಳನ್ನು ಮಂಜೂರು ಮಾಡಲಾಗಿದ್ದು, ಸದರಿ ಹುದ್ದೆಗಳು ಖಾಲಿಯಿರುತ್ತವೆ. |
| ಆ) | 10 ವರ್ಷಗಳಿಂದ ಉಪನ್ಯಾಸಕರ ಕೊರತೆಯಿಂದ ಮಕ್ಕಳ ದಾಖಲಾತಿ ಪ್ರಮಾಣ ಕಡಿಮೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಸಮಸ್ಯೆಯನ್ನು ಯಾವಾಗ ಸರಿಪಡಿಸಲಾಗುವುದು; | ಕಡಿಮೆ ಕಾರ್ಯಭಾರವಿರುವ ವಿಷಯಗಳ ಉಪನ್ಯಾಸಕರುಗಳನ್ನು ಅಗತ್ಯವಿರುವ ಸರ್ಕಾರಿ ಪದವಿ ಪೂರ್ವ ಕಾಲೇಜುಗಳಿಗೆ ನಿಯೋಜಿಸಲು ಆಯಾ ಜಿಲ್ಲಾ ಉಪನಿರ್ದೇಶಕರುಗಳು ಕ್ರಮ ಕೈಗೊಂಡಿರುತ್ತಾರೆ. ಸಂಬಂಧಪಟ್ಟ ವಿಷಯದ ಉಪನ್ಯಾಸಕರುಗಳ ಲಭ್ಯತೆ ಇಲ್ಲದಿದ್ದಲ್ಲಿ, ಅತಿಥಿ ಉಪನ್ಯಾಸಕರನ್ನು ನೇಮಕ ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿರುತ್ತದೆ. |

| | | |
|---|---|---|
| ಇ) | ಪೂರ್ಣ ಪ್ರಮಾಣದ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಗಳನ್ನು ಯಾವಾಗ ನೇಮಕ ಮಾಡಲಾಗುವುದು? | ಸರ್ಕಾರಿ ಪದವಿ ಪೂರ್ವ ಕಾಲೇಜುಗಳಲ್ಲಿ ಖಾಲಿಯಿರುವ ಬೋಧಕ ಮತ್ತು ಬೋಧಕೇತರ ಹುದ್ದೆಗಳನ್ನು ಭರ್ತಿ ಮಾಡುವ ಕುರಿತಂತೆ ನಿರ್ದೇಶನಾಲಯದಿಂದ ಪ್ರಸ್ತಾವನೆ ಪಡೆದು ನಂತರ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುತ್ತಿದೆ. |

**ಸಂಖ್ಯೆ: ಇಡಿ 198 ಡಿಜಿಡಬ್ಲ್ಯೂ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 494

ಮಾನ್ಯ ಸದಸ್ಯರ ಹೆಸರು : ಶ್ರೀ ಶ್ರೀನಿವಾಸ್ (ವಾಸು) ಎಸ್.ಆರ್. (ಗುಬ್ಬಿ)

ಉತ್ತರಿಸಬೇಕಾದ ದಿನಾಂಕ : 16.12.2021

ಉತ್ತರಿಸುವ ಸಚಿವರು : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀ ವಿಶಾಸ್ತ್ರ, ಸಚಿವರು

*****

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಪ್ರವಾಸೋದ್ಯಮ ಇಲಾಖೆಯ ಅಧೀನದಲ್ಲಿರುವ ಕೆ.ಟಿ.ಐ.ಎಲ್, ಜೆ.ಎಲ್.ಆರ್, ಕೆ.ಎಸ್.ಟಿ.ಡಿ.ಸಿ., ನಿಗಮಗಳಲ್ಲಿ ಮಂಜೂರಾದ ಹುದ್ದೆಗಳೆಷ್ಟು: ನಿಗಮಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ, ಅರೆ ಸರ್ಕಾರಿ, ಗುತ್ತಿಗೆ ಹಾಗೂ ಹೊರಗುತ್ತಿಗೆ ಸಿಬ್ಬಂದಿಗಳೆಷ್ಟು? (ವಿವರ ಹಾಗೂ ಅವರ ಜವಾಬ್ದಾರಿಗಳ ವರ್ಗವಾರು ವಿವರ ನೀಡುವುದು) | ಪ್ರವಾಸೋದ್ಯಮ ಇಲಾಖೆಯ ಅಧಿನದಲ್ಲಿರುವ ಕೆ.ಟಿ.ಐ.ಎಲ್, ಜೆ.ಎಲ್. ಆರ್, ಕೆ.ಎಸ್.ಟಿ.ಡಿ.ಸಿ., ನಿಗಮಗಳಲ್ಲಿ ಮಂಜೂರಾದ ಹುದ್ದೆಗಳ ವಿವರ ಈ ಕೆಳಕಂಡಂತಿದೆ. (see table below) ವಿವರವನ್ನು ಅನುಬಂಧ-1, ಅನುಬಂಧ-2 ಮತ್ತು ಅನುಬಂಧ-3ರಲ್ಲಿ ಒದಗಿಸಿದೆ. |
| ಆ) | ಕೋವಿಡ್-19 ಸಾಂಕ್ರಾಮಿಕ ರೋಗ ಸಂದರ್ಭದಲ್ಲಿ ಸರ್ಕಾರಿ, ಅರೆ ಸರ್ಕಾರಿ, ಗುತ್ತಿಗೆ ಹಾಗೂ ಹೊರಗುತ್ತಿಗೆ ಸಿಬ್ಬಂದಿಗಳಿಗೆ ವೇತನ ಪಾವತಿ ಮಾಡಲಾಗಿದೆಯೇ ಅಥವಾ ಕೆಲಸದಿಂದ ವಜಾ ಗೊಳಿಸಿರುವ ಕುರಿತು ವರದಿಯಾಗಿದೆಯೇ: ಇದ್ದಲ್ಲಿ, ಸರ್ಕಾರದ ಗಮನಕ್ಕೆ ಬಂದಿದೆಯೇ: ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ: | ವೇತನವನ್ನು ಪಾವತಿ ಮಾಡಲಾಗಿದೆ ಮತ್ತು ಕೆಲಸದಿಂದ ಯಾರನ್ನು ವಜಾ ಗೊಳಿಸಿರುವುದಿಲ್ಲ. |
| ಇ) | ಪ್ರವಾಸೋದ್ಯಮ ಇಲಾಖೆಯಲ್ಲಿ 2017-18 ರಿಂದ 2021-22ನೇ ಸಾಲಿನವರೆಗೆ ಮಂಜೂರಾದ ಕಾಮಗಾರಿಗಳೆಷ್ಟು; ಬಿಡುಗಡೆಯಾದ ಅನುದಾನ, ಬಾಕಿ ಇರುವ ಅನುದಾನ, ಪ್ರಗತಿಯ ವರದಿ, ಛಾಯಚಿತ್ರದೊಂದಿಗೆ ಪ್ರಸ್ತುತ ವರದಿ ನೀಡುವುದು; | ಪ್ರವಾಸೋದ್ಯಮ ಇಲಾಖೆಯಲ್ಲಿ 2017-18 ರಿಂದ 2021-22ನೇ ಸಾಲಿನವರೆಗೆ ಮಂಜೂರಾದ ಕಾಮಗಾರಿಗಳ ವಿವರ, ಬಿಡುಗಡೆಯಾದ ಅನುದಾನ, ಬಾಕಿ ಇರುವ ಅನುದಾನ, ಪ್ರಗತಿಯ ಹಂತದ ವಿವರಗಳನ್ನು ಅನುಬಂಧ-4 ರಲ್ಲಿ ಒದಗಿಸಿದೆ. |

| ಕಛೇರಿಯ ಹೆಸರು | ಮಂಜೂರಾದ ಹುದ್ದೆಗಳು | ಸರ್ಕಾರಿ | ಅರೆ ಸರ್ಕಾರಿ | ಗುತ್ತಿಗೆ | ಹೊರ ಗುತ್ತಿಗೆ |
|---|---|---|---|---|---|
| ಕೆ.ಟಿ.ಐ.ಎಲ್ | 18 | 03 | - | 04 | 04 |
| ಜೆ.ಎಲ್. ಆರ್ | 650 | 190 | - | 367 | 307 |
| ಕೆ.ಎಸ್.ಟಿ.ಡಿ.ಸಿ | 755 | 143 | - | 546 | 258 |

..2..

| | | |
|---|---|---|
| ಈ) | ಕಳೆದ ಮೂರು ವರ್ಷಗಳಿದ ಗುಬ್ಬಿ ವಿಧಾನ ಸಭಾ ಕ್ಷೇತ್ರ ವ್ಯಾಪ್ತಿಯಲ್ಲಿ ಬಿಡುಗಡೆಯಾದ ಅನುದಾನ ಎಷ್ಟು; ಬಿಡುಗಡೆಯಾದ ಸಂಪೂರ್ಣವಾಗದೆ ಇರುವ ಕಾಮಗಾರಿಗಳು ಯಾವುವು? (ಸಂಪೂರ್ಣ ವಿವರ ನೀಡುವುದು) | ತುಮಕೂರು ಜಿಲ್ಲೆಯ ಗುಬ್ಬಿ ತಾಲ್ಲೂಕಿನ 2017-18, 2018-19 ಮತ್ತು 2019-20 ನೇ ಸಾಲಿನವರೆಗೆ 7 ಕಾಮಗಾರಿಗಳು ಮಂಜೂರಾಗಿದ್ದು, ಸದರಿ ಕಾಮಗಾರಿಗಳಿಗೆ ಇದುವರೆಗೆ ಒಟ್ಟು ರೂ.154.75 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br>ಕಾಮಗಾರಿಗಳ ಪೂರ್ಣ ವಿವರಗಳನ್ನು **ಅನುಬಂಧ-5** ರಲ್ಲಿ ಒದಗಿಸಿದೆ.<br>2020-21 ಮತ್ತು 2021-22ನೇ ಸಾಲಿನಲ್ಲಿ ಗುಬ್ಬಿ ತಾಲ್ಲೂಕಿಗೆ ಯಾವುದೇ ಕಾಮಗಾರಿಗಳು ಮಂಜೂರಾಗಿರುವುದಿಲ್ಲ. |

ಸಂಖ್ಯೆ: **TOR 303 TDV 2021**

**(ಆನಂದ್ ಸಿಂಗ್)**
ಪ್ರವಾಸೋದ್ಯಮ ಹಾಗೂ ಪರಿಸರ
ಮತ್ತು ಜೀವಿಶಾಸ್ತ್ರ ಸಚಿವರು

## ಅನುಬಂಧ -1

### ಕೆ.ಟಿ.ಐ.ಎಲ್ ನಿಗಮದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ, ಅರೆ ಸರ್ಕಾರಿ, ಗುತ್ತಿಗೆ ಹಾಗೂ ಹೊರಗುತ್ತಿಗೆ ಸಿಬ್ಬಂದಿಗಳ ವಿವರ:

| ಕ್ರ.ಸಂ. | ಹುದ್ದೆಯ ಪದನಾಮ, | ಹುದ್ದೆಗಳ ವಿವರ |
|---|---|---|
| 1. | ಸರ್ಕಾರಿ ಅಧಿಕಾರಿಗಳು | 03 |
| 2. | ಅರೆ ಸರ್ಕಾರಿ ಅಧಿಕಾರಿಗಳು | 00 |
| 3. | ಗುತ್ತಿಗೆ ಸಿಬ್ಬಂದಿಗಳು | 04 |
| 4. | ಹೊರಗುತ್ತಿಗೆ ಸಿಬ್ಬಂದಿಗಳು | 04 |
| ಒಟ್ಟು | | 11 |

### ಕೆ.ಟಿ.ಐ.ಎಲ್ ನಿಗಮದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ ಅಧಿಕಾರಿಗಳ ವಿವರ ಈ ಕೆಳಕಂಡಂತಿವೆ.

| ಕ್ರ. ಸಂ. | ಹೆಸರು | ಸರ್ಕಾರಿ ಅಧಿಕಾರಿಗಳ ವಿವರ | ಕೆಟಿಐಎಲ್ ನಲ್ಲಿ ನಿರ್ವಹಿಸುತ್ತಿರುವ ಹುದ್ದೆ |
|---|---|---|---|
| 1. | ಶ್ರೀಮತಿ ಸಿಂಧೂ.ಬಿ. ರೂಪೇಶ್ ಭಾ.ಆ.ಸೇ | ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಹಾಗೂ ವ್ಯವಸ್ಥಾಪಕ ನಿರ್ದೇಶಕರು (ಪ್ರಭಾರ) | ಕಛೇರಿ ಆಡಳಿತ ಮತ್ತು ಪ್ರವಾಸೋದ್ಯಮ ಇಲಾಖೆಯಿಂದ ನೀಡುವ ಕಾಮಗಾರಿಗಳನ್ನು ಅನುಷ್ಠಾನಗೊಳಿಸುವುದು. |
| 2. | ಶ್ರೀ ಹೆಚ್.ಪಿ. ಜನಾರ್ದನ | ಜಂಟಿ ನಿರ್ದೇಶಕರು, ಪ್ರವಾಸೋದ್ಯಮ ಇಲಾಖೆ ಹಾಗೂ ಕಾರ್ಯನಿರ್ವಾಹಕ ನಿರ್ದೇಶಕರು (ಪ್ರಭಾರ) | |
| 3. | ಶ್ರೀ ವಿ.ಎನ್ ಕೃಷ್ಣಮೂರ್ತಿ. | ಕಾರ್ಯಪಾಲಕ ಅಭಿಯಂತರರು, ಪ್ರವಾಸೋದ್ಯಮ ಇಲಾಖೆ ಹಾಗೂ ಕಾರ್ಯಪಾಲಕ ಅಭಿಯಂತರರು (ಪ್ರಭಾರ) | |

### ಕೆ.ಟಿ.ಐ.ಎಲ್ ಗುತ್ತಿಗೆ ಹಾಗೂ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿ/ಅಧಿಕಾರಿಗಳ ವಿವರ ಹಾಗೂ ಜವಾಬ್ದಾರಿಗಳ ವಿವರ:

| ಕ್ರ. ಸಂ. | ಅಧಿಕಾರಿ/ಸಿಬ್ಬಂದಿಗಳ ವಿವರ | ಹುದ್ದೆಯ ಪದನಾಮ, | ಜವಾಬ್ದಾರಿಗಳ ವಿವರ: |
|---|---|---|---|
| 1. | ಶ್ರೀಮತಿ. ಸುಷ್ಮ. ಬಿ.ಎನ್ | ಸಹಾಯಕ ಅಭಿಯಂತರರು | ಕಾಮಗಾರಿಗಳ ಸ್ಥಳ ಪರಿಶೀಲನೆ, ಕಾಮಗಾರಿಗಳ ಪ್ರಗತಿ ಬಗ್ಗೆ ವರದಿ ನೀಡುವುದು, ಅಂದಾಜು ಪಟ್ಟಿ ತಯಾರಿಸುವುದು, ಟೆಂಡರ್ ದಾಖಲೆಗಳನ್ನು ತಯಾರಿಸುವುದು, ಟೆಂಡರ್ ಪ್ರಕ್ರಿಯೆಯನ್ನು ನಡೆಸುವುದು ಮತ್ತು ಅನುಷ್ಠಾನ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು.<br>(ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕಾರ್ಯಗಳ ಜೊತೆಗೆ ತಾತ್ಕಲಿಕವಾಗಿ ಹೆಚ್.ಆರ್.ಒ. ರವರ ಕಾರ್ಯನಿರ್ವಹಿಸುವುದು) |

| | | | |
|---|---|---|---|
| 2. | ಶ್ರೀ. ಮನು. ಹೆಚ್.ಡಿ | ಸಹಾಯಕ ಅಭಿಯಂತರರು | ಕಾಮಗಾರಿಗಳ ಸ್ಥಳಪರಿಶೀಲನೆ, ಕಾಮಗಾರಿಗಳ ಪ್ರಗತಿ ಬಗ್ಗೆ ವರದಿ ನೀಡುವುದು, ಅಂದಾಜು ಪಟ್ಟಿ ತಯಾರಿಸುವುದು, ಟೆಂಡರ್ ದಾಖಲೆಗಳನ್ನು ತಯಾರಿಸುವುದು, ಟೆಂಡರ್ ಪ್ರಕ್ರಿಯೆಯನ್ನು ನಡೆಸುವುದು ಮತ್ತು ಅನುಷ್ಠಾನ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು. |
| 3. | ಶ್ರೀ. ಯೋಗೇಶ್. ಬಿ. ಅಣದೊರೆ | ಸಹಾಯಕ ಅಭಿಯಂತರರು | ಕಾಮಗಾರಿಗಳ ಸ್ಥಳಪರಿಶೀಲನೆ, ಕಾಮಗಾರಿಗಳ ಪ್ರಗತಿ ಬಗ್ಗೆ ವರದಿ ನೀಡುವುದು, ಅಂದಾಜು ಪಟ್ಟಿ ತಯಾರಿಸುವುದು, ಟೆಂಡರ್ ದಾಖಲೆಗಳನ್ನು ತಯಾರಿಸುವುದು, ಟೆಂಡರ್ ಪ್ರಕ್ರಿಯೆಯನ್ನು ನಡೆಸುವುದು ಮತ್ತು ಅನುಷ್ಠಾನ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು. |
| 4 | ಡಾ. ಹಿಂದೂಪುರ್ ರಾಜಸಿಂಹ | ತಾಂತ್ರಿಕ ಸಲಹೆಗಾರರು | ಕರ್ನಾಟಕ ರಾಜ್ಯದಾದ್ಯಂತ ಕೈಗೊಳ್ಳುವ ಕಾಮಗಾರಿಗಳಿಗೆ ತ್ರಾಂತ್ರಿಕ ಸಲಹೆಯನ್ನು ನೀಡುವುದು. |
| 5. | ಶ್ರೀ ಅಕ್ಷತ್ ಕುಮಾರ್ | ಸಹಾಯಕ ಅಭಿಯಂತರರು | ಕಾಮಗಾರಿಗಳ ಸ್ಥಳಪರಿಶೀಲನೆ, ಕಾಮಗಾರಿಗಳ ಪ್ರಗತಿ ಬಗ್ಗೆ ವರದಿ ನೀಡುವುದು, ಅಂದಾಜು ಪಟ್ಟಿ ತಯಾರಿಸುವುದು, ಟೆಂಡರ್ ದಾಖಲೆಗಳನ್ನು ತಯಾರಿಸುವುದು, ಟೆಂಡರ್ ಪ್ರಕ್ರಿಯೆಯನ್ನು ನಡೆಸುವುದು ಮತ್ತು ಅನುಷ್ಠಾನ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು. |
| 6. | ಶ್ರೀ ಪುನೀತ್ ಬಿ.ವಿ | ಸಹಾಯಕ ಅಭಿಯಂತರರು | ಕಾಮಗಾರಿಗಳ ಸ್ಥಳಪರಿಶೀಲನೆ, ಕಾಮಗಾರಿಗಳ ಪ್ರಗತಿ ಬಗ್ಗೆ ವರದಿ ನೀಡುವುದು, ಅಂದಾಜು ಪಟ್ಟಿ ತಯಾರಿಸುವುದು, ಟೆಂಡರ್ ದಾಖಲೆಗಳನ್ನು ತಯಾರಿಸುವುದು, ಟೆಂಡರ್ ಪ್ರಕ್ರಿಯೆಯನ್ನು ನಡೆಸುವುದು ಮತ್ತು ಅನುಷ್ಠಾನ ಸಂಸ್ಥೆಗಳೊಂದಿಗೆ ಸಮನ್ವಯ ಸಾಧಿಸುವುದು. |
| 7. | ಶ್ರೀಮತಿ.ಅನಿತಾ.ಸಿ. | ದ್ವಿ.ದ.ಸ | ಸ್ವೀಕೃತಿ ಮತ್ತು ರವಾನೆ ಪತ್ರಗಳ ನಿರ್ವಹಣೆ, ಹಾಜರಾತಿ ಪುಸ್ತಕದ ನಿರ್ವಹಣೆ, ಲೇಖನಾ ಸಾಮಗ್ರಿ ಮತ್ತು ಪುಸ್ತಕದ ನಿರ್ವಹಣೆ ಹಾಗೂ ಮೇಲಾಧಿಕಾರಿಗಳು ವಹಿಸುವ ಇತರೆ ವಿಷಯಗಳು. |
| 8. | ಶ್ರೀ. ಮೋಹನ್.ಎಂ.ಜೆ | ಗ್ರೂಪ್ 'ಡಿ' | ಕಾರ್ಯನಿರ್ವಹಕ ನಿರ್ದೇಶಕರು, ಇವರ ಬಳಿ ಕಾರ್ಯನಿರ್ವಹಿಸುವುದು. |

ಅನುಬಂಧ-2

## ಅರಣ್ಯ, ವಸತಿ ಮತ್ತು ವಿಹಾರದಾಮ ನಿಗಮದಲ್ಲಿ ಕಾರ್ಯನಿರ್ವಹಿಸುತ್ತಿರುವ ಸರ್ಕಾರಿ, ಅರೆ ಸರ್ಕಾರಿ, ಗುತ್ತಿಗೆ ಹಾಗೂ ಹೊರಗುತ್ತಿಗೆ ಸಿಬ್ಬಂದಿಗಳ ವಿವರ:

ಅರಣ್ಯ ವಸತಿ ಮತ್ತು ವಿಹಾರಧಾಮಗಳ ಸಂಸ್ಥೆಯಲ್ಲಿ 650 ಹುದ್ದೆಗಳಿದ್ದು, ಪ್ರಸ್ತುತ 190 ಖಾಯಂ ನೌಕರರು, 367 ಗುತ್ತಿಗೆ ನೌಕರರು ಹಾಗೂ 307 ಹೊರಗುತ್ತಿಗೆ ಆಧಾರದ ನೌಕರರು ಕಾರ್ಯನಿರ್ವಹಿಸುತ್ತಿದ್ದಾರೆ.

ವಿವರ ಈ ಕೆಳಕಂಡಂತಿದೆ:

### 1) ಕೇಂದ್ರ ಕಛೇರಿಯ ಖಾಯಂ ನೌಕರರ ಹೆಸರು, ಪದನಾಮ ಹಾಗೂ ಜವಾಬ್ದಾರಿಗಳ ವಿವರ

| ಕ್ರ ಸ | ಹೆಸರು | ಪದನಾಮ | ಜವಾಬ್ದಾರಿಗಳ ವಿವರ |
|---|---|---|---|
| 1 | ಎಂ. ಯುವರಾಜ್ | ಪ್ರಾಂತೀಯ ಪ್ರಧಾನ ವ್ಯವಸ್ಥಾಪಕರು | ಎಲ್ಲಾ ಘಟಕಗಳಿಗೆ ಸಂಬಂಧಿತ ಎಲ್ಲಾ ಸಿಬ್ಬಂದಿ ವಿಚಾರಗಳು, ನಿರ್ದಿಷ್ಟ ಮಿತಿಯವರೆಗೆ ವೆಚ್ಚಗಳಿಗೆ ಮಂಜುರಾತಿ ಹಾಗೂ ವ್ಯವಸ್ಥಾಪಕ ನಿರ್ದೇಶಕರವರು/ಕಾರ್ಯನಿರ್ವಾಹಕ ನಿರ್ದೇಶಕರು ಕಾಲಾನುಕಾಲಕ್ಕೆ ವಹಿಸಬಹುದಾದ ಇತರೆ ಯಾವುದೇ ಜವಾಬ್ದಾರಿಗಳು. |
| 2 | ಎಸ್. ಕಾರ್ತಿಕೇಯನ್ | ಉಪ ಪ್ರಧಾನ ವ್ಯವಸ್ಥಾಪಕರು | ಎಲ್ಲಾ ಘಟಕಗಳ ವನ್ಯಜೀವಿ ಸಫಾರಿಯ ನಿರ್ವಹಣೆ ಮತ್ತು ಎಲ್ಲಾ ನಿಸರ್ಗತಜ್ಞರ ಕರ್ತವ್ಯಗಳ ಉಸ್ತುವಾರಿ ನೋಡಿಕೊಳ್ಳುವುದು. |
| 3 | ಎಂ.ಕೆ. ಲಿಂಗರಾಜ | ಸಹಾಯಕ ಆಡಳಿತಾಧಿಕಾರಿ | ಆಡಳಿತ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 4 | ಶೋಭಾ ಶಿವಕುಮಾರ್ | ಸಹಾಯಕ ಆಡಳಿತಾಧಿಕಾರಿ | ಅಭಿವೃದ್ದಿ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 5 | ಎನ್. ಜಯಂತಿ | ಸಹಾಯಕ ಆಡಳಿತಾಧಿಕಾರಿ | ಮಾರಾಟ ಶಾಖೆಯ ಸಂಪೂರ್ಣ ಜವಾಬ್ದಾರಿ |
| 6 | ವನಿತಾ ದಿಲಿಪ್ ದೇಸಾಯಿ | ಸಹಾಯಕ ಆಡಳಿತಾಧಿಕಾರಿ | ಮಾರಾಟ ಶಾಖೆಯ ಸಂಬಂಧಿಸಿದ ಕರ್ತವ್ಯಗಳು |
| 7 | ಕೆ. ಶೈನ್ ಜೋಸೆಫ್ | ಕಚೇರಿ ಅಧೀಕ್ಷಕರು ಶ್ರೇಣಿ-1 | ವ್ಯವಸ್ಥಾಪಕ ನಿರ್ದೇಶಕರ ಆಪ್ತ ಸಹಾಯಕರಾಗಿ ಕರ್ತವ್ಯನಿರ್ವಹಿಸುವುದು. |
| 8 | ಎಂ.ಎಸ್. ಶ್ರೀರಾಮಯ್ಯ | ಕಚೇರಿ ಅಧೀಕ್ಷಕರು ಶ್ರೇಣಿ-1 | ಮೆಟ್ರೋಗೆ ಸಂಬಂಧಿಸಿದ ಕರ್ತವ್ಯಗಳು |
| 9 | ವಿ. ಯತೀಶ್ ಕುಮಾರ್ | ಕಚೇರಿ ಅಧೀಕ್ಷಕರು ಶ್ರೇಣಿ-1 | ಮಾರಾಟ ಶಾಖೆಯ ಸಂಬಂಧಿಸಿದ ಕರ್ತವ್ಯಗಳು |
| 10 | ಮೊಹಮ್ಮದ್ ಗಯಾಜ್ | ವ್ಯವಸ್ಥಾಪಕರು (ಹಣಕಾಸು) | ಲೆಕ್ಕಪತ್ರ ಶಾಖೆಯ ಸಂಪೂರ್ಣ ಜವಾಬ್ದಾರಿ & ನಿರ್ವಹಣೆ |
| 11 | ಅನಂತ್ ಎನ್ ಕಾನಗೊ | ಮುಖ್ಯ ಲೆಕ್ಕಾಧಿಕಾರಿ | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 12 | ಎಸ್. ಮುರುಗನ್ | ಹಿರಿಯ ಲೆಕ್ಕಾಧಿಕಾರಿ | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 13 | ಅಣ್ಣೇಗೌಡ | ಲೆಕ್ಕಾಧಿಕಾರಿ | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 14 | ಜಿ.ನವೀನ | ಲೆಕ್ಕಾಧಿಕಾರಿ | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 15 | ಕೆ.ಎನ್.ಸೋಮಶೇಖರ್ | ಲೆಕ್ಕಾಧಿಕಾರಿ | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 16 | ಎಸ್.ಮುನಿರಾಜು | ಕಚೇರಿ ಅಧೀಕ್ಷಕರು ಶ್ರೇಣಿ-2 | ಲೆಕ್ಕಪತ್ರ ಶಾಖೆಗೆ ಸಂಬಂಧಿಸಿದ ಕರ್ತವ್ಯಗಳು |
| 17 | ವೈ.ಆರ್.ಶ್ರೀಮತಿ | ಕಚೇರಿ ಅಧೀಕ್ಷಕರು ಶ್ರೇಣಿ-2 | ಮಾರಾಟ ಶಾಖೆಯ ಸಂಬಂಧಿಸಿದ ಕರ್ತವ್ಯಗಳು |
| 18 | ಎಸ್.ಎಂ. ಮಂಜುನಾಥ್ | ಸಹಾಯಕ ವ್ಯವಸ್ಥಾಪಕರು | ಮಾರಾಟ ಶಾಖೆಯ ಸಂಬಂಧಿಸಿದ |

| | | | |
|---|---|---|---|
| | | | ಕರ್ತವ್ಯಗಳು |
| 19 | ಎನ್.ಮಹೇಶ್ | ಕಚೇರಿ ಅಧೀಕ್ಷಕರು ಶ್ರೇಣಿ-2 | ಆಡಳಿತ ಶಾಖೆಯ ಸಂಬಂಧಿಸಿದ ಕರ್ತವ್ಯಗಳು |
| 20 | ಎಚ್.ಜಿ.ಹರೀಶ್ ಬಾಬು | ಕಚೇರಿ ಸಹಾಯಕರು | ಮಾರಾಟ ಶಾಖೆಯ ಸಂಬಂಧಿಸಿದ ಕರ್ತವ್ಯಗಳು |
| 21 | ಮಹೇಂದ್ರ ಕುಮಾರ್ | ಸಹಾಯಕ ಮೇಲ್ವಿಚಾರಕರು (ವಾಹನಗಳ ಮೆಕಾನಿಕ್) | ಸಂಸ್ಥೆಯ ಎಲ್ಲಾ ವಾಹನಗಳ ನಿರ್ವಹಣೆಯ ಕರ್ತವ್ಯಗಳು |
| 22 | ಕೆ.ಬಿ.ಮುದ್ದೇಗೌಡ | ಹಿರಿಯ ವಾಹನ ಚಾಲಕರು | ವಾಹನ ಚಾಲಾಯಿಸುವುದು ಮತ್ತು ನಿರ್ವಹಣೆ |
| 23 | ರವಿಶಿವನ್ | ಹಿರಿಯ ವಾಹನ ಚಾಲಕರು | ವಾಹನ ಚಾಲಾಯಿಸುವ ಕರ್ತವ್ಯ |
| 24 | ಎಲ್.ಕೃಷ್ಣಮೂರ್ತಿ | ಹಿರಿಯ ವಾಹನ ಚಾಲಕರು | ವಾಹನ ಚಾಲಾಯಿಸುವ ಕರ್ತವ್ಯ |
| 25 | ಮುನಿವೆಂಕಟಪ್ಪ ನಾಯಕ್ | ಹಿರಿಯ ವಾಹನ ಚಾಲಕರು | ವಾಹನ ಚಾಲಾಯಿಸುವ ಕರ್ತವ್ಯ |
| 26 | ಆರ್.ರಮೇಶ್ | ಹಿರಿಯ ದಲಾಯತ್ | ಕಛೇರಿ ಕೆಲಸಗಳು |
| 27 | ಆರ್.ಶಂಕರಪ್ಪ | ಬೇರರ್/ರೂಂಬಾಯ್ | ಕಛೇರಿ ಕೆಲಸಗಳು |
| 28 | ಕೆ.ಪುಟ್ಟರಾಜು | ಸಾ.ಉ.ಕೆಲಸಗಾರರು(ಶ್ರೇಣಿ-1) | ಕಛೇರಿ ಕೆಲಸಗಳು |
| 29 | ಕೆ.ಬಿ.ಧನಂಜಯ | ವಾಹನ ಚಾಲಕರು (ಶ್ರೇಣಿ-1) | ವಾಹನ ಚಾಲಾಯಿಸುವುದು ಮತ್ತು ನಿರ್ವಹಣೆ |
| 30 | ನಸೀರ್ ಅಹ್ಮದ್ | ವಾಹನ ಚಾಲಕರು (ಶ್ರೇಣಿ-1) | ವಾಹನ ಚಾಲಾಯಿಸುವುದು ಮತ್ತು ನಿರ್ವಹಣೆ |
| 31 | ಕೆ.ಕೆ.ಸುಂದರೇಶ | ವಾಹನ ಚಾಲಕರು (ಶ್ರೇಣಿ-1) | ವಾಹನ ಚಾಲಾಯಿಸುವುದು ಮತ್ತು ನಿರ್ವಹಣೆ |
| 32 | ಎಚ್.ಸಿ. ಕುಮಾರಸ್ವಾಮಿ | ವಾಹನ ಚಾಲಕರು (ಶ್ರೇಣಿ-1) | ವಾಹನ ಚಾಲಾಯಿಸುವುದು ಮತ್ತು ನಿರ್ವಹಣೆ |

**ಕೇಂದ್ರ ಕಛೇರಿಯ ಹೊರಗುತ್ತಿಗೆ ಅಧಿಕಾರಿಗಳು, ಪದನಾಮ ಮತ್ತು ಜವಾಬ್ದಾರಿಗಳ ವಿವರ**

| ಕ್ರ ಸ | ಹೆಸರು ಶ್ರೀ/ಶ್ರೀಮತಿ. | ಪದನಾಮ | ಜವಾಬ್ದಾರಿಗಳ ವಿವರ |
|---|---|---|---|
| 1 | ಹಿರಿಯ ಆಡಳಿತಾಧಿಕಾರಿ | ಬಿ.ಎನ್.ಯತಿರಾಜ್ | ಆಡಳಿತ ಶಾಖೆಯ ಸಂಪೂರ್ಣ ಜವಾಬ್ದಾರಿ |
| 2 | ಸಮನ್ವಯಾಧಿಕಾರಿ | ಐ.ರವೀಂದ್ರನಾಥ್ | ಅರಣ್ಯ ಇಲಾಖೆಯೊಂದಿಗೆ ಸಮನ್ವಯ ಕರ್ತವ್ಯ ನಿರ್ವಹಿಸುವುದು. |
| 3 | ಸಾರ್ವಜನಿಕ ಸಂಪರ್ಕಾಧಿಕಾರಿ. | ಎಚ್.ಟಿ.ರತ್ನಾಕರ್ | ಪ್ರಮುಖ ಇಲಾಖೆಗಳೊಂದಿಗೆ ಸಭೆ ನಡೆಸಲು ಸಮನ್ವಯದ ಕರ್ತವ್ಯ |

**2) ಕಬಿನಿ ಘಟಕದ ಖಾಯಂ ಅಧಿಕಾರಿಗಳು/ನೌಕರರ ಪದನಾಮ ಮತ್ತು ಜವಾಬ್ದಾರಿಗಳ ವಿವರ**

| ಕ್ರ ಸ | ನೌಕರರ ಹೆಸರು ಶ್ರೀಮತಿ/ಶ್ರೀ. | ಪದನಾಮ | ಜವಾಬ್ದಾರಿಗಳ ವಿವರ |
|---|---|---|---|
| 1 | ಭೀಮಯ್ಯ | ನಿಸರ್ಗತಜ್ಞರು (ಗ್ರೇಡ್-3) | ಘಟಕಕ್ಕೆ ಭೇಟಿ ಕೊಡುವ ಅತಿಥಿಗಳ ಜೊತೆ ಸಂಭಾಷಣೆ ಹಾಗೂ ಪರಿಸರ, ,ಸಸ್ಯಸಂಪತ್ತು ಮತ್ತು ವನ್ಯಜೀವಿ/ಪ್ರಾಣಿಸಂಪತ್ತಿನ ಬಗ್ಗೆ ಅವರಲ್ಲಿ ಜಾಗೃತಿ ಮೂಡಿಸುವುದು. |
| 2 | ಶಿವಾನಂದ ಜಿ ಹರಿಕಂತ್ರ | ನಿಸರ್ಗತಜ್ಞರು (ಗ್ರೇಡ್-4) | ಘಟಕಕ್ಕೆ ಭೇಟಿ ಕೊಡುವ ಅತಿಥಿಗಳ ಜೊತೆ ಸಂಭಾಷಣೆ ಹಾಗೂ ಪರಿಸರ, ,ಸಸ್ಯಸಂಪತ್ತು ಮತ್ತು ವನ್ಯಜೀವಿ/ಪ್ರಾಣಿಸಂಪತ್ತಿನ ಬಗ್ಗೆ ಅವರಲ್ಲಿ ಜಾಗೃತಿ ಮೂಡಿಸುವುದು. |
| 3 | ಕೆ.ವೇಣುಗೋಪಾಲ್ | ಹಿರಿಯ ಸ್ಟೀವರ್ಡ್-ಬಾರ್/ಕೇಟರಿಂಗ್ | ಘಟಕದಲ್ಲಿ ತಂಗುವ ಅತಿಥಿಗಳಿಗೆ ಆಹಾರದ ಅನುಕೂಲತೆಗಳನ್ನು |

| | | | |
|---|---|---|---|
| | | | ನೋಡಿಕೊಳ್ಳುವುದು. |
| 4 | ನೂರ್‌ಜಹಾನ್ | ಕಛೇರಿ ಸಹಾಯಕರು | ಘಟಕಕ್ಕೆ ಸಂಬಂಧಪಟ್ಟಂತೆ ಪತ್ರ ವ್ಯವಹಾರದ ಕೆಲಸವನ್ನು ನಿರ್ವಹಿಸುವುದು. |
| 5 | ಅಣ್ಣೇ ಮೇರಿ | ಸೂಪರ್‌ವೈಸರ್ (ಹೌಸ್ ಕೀಪಿಂಗ್ & ಮೈನ್‌ಟೆನನ್ಸ್ | ಘಟಕದ ಹೌಸ್‌ಕೀಪಿಂಗ್ ಕರ್ತವ್ಯದ ಸಂಪೂರ್ಣವಾಗಿ ನಿರ್ವಹಿಸುವುದು. |
| 6 | ಇ.ಗೋಪಾಲ್ | ಹಿರಿಯ ಅಡಿಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 7 | ಹರೀಶ್ | ಹಿರಿಯ ಅಡಿಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 8 | ಕೃಷ್ಣ ನಾಯಕ | ಹಿರಿಯ ಅಡಿಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 9 | ಪುಟ್ಟರಾಜು | ಅಡುಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 10 | ಅನಂದಸ್ವಾಮಿ | ಅಡುಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 11 | ಕೃಷ್ಣ | ಅಡುಗೆಯವರು | ವಿವಿಧ ಬಗೆಯ ಅಡುಗೆ ತಿನಿಸುಗಳನ್ನು ಒಳಗೊಂಡಂತೆ ರುಚಿಕರ ಆಹಾರದ ತಯಾರಿಕೆ |
| 12 | ಬಿ.ವಿ.ಸಿದ್ದಪ್ಪ | ಹಿರಿಯ ವಾಹನ ಚಾಲಕರು | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 13 | ಬಿ.ಸೋಮಶೇಖರ್ | ಹಿರಿಯ ವಾಹನ ಚಾಲಕರು | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 14 | ಅಬ್ದುಲ್ ವಾಹೀದ್ ಖಾನ್ | ಹಿರಿಯ ವಾಹನ ಚಾಲಕರು | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 15 | ಪ್ರಕಾಶ್ | ವಾಹನ ಚಾಲಕರು (ಗ್ರೇಡ್-1) | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 16 | ಅಂಜದ್ ಖಾನ್ | ವಾಹನ ಚಾಲಕರು (ಗ್ರೇಡ್-1) | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 17 | ಅನಿಲ್ ಕುಮಾರ್ | ವಾಹನ ಚಾಲಕರು (ಗ್ರೇಡ್-1) | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು.. |
| 18 | ಜಿ.ಲೋಕೇಶ | ವಾಹನ ಚಾಲಕರು (ಗ್ರೇಡ್-1) | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು. |
| 19 | ರೇವಣ್ಣ | ವಾಹನ ಚಾಲಕರು (ಗ್ರೇಡ್-1) | ಅತಿಥಿಗಳನ್ನು ವನ್ಯಜೀವಿ ಸಫಾರಿ ಮುಂತಾದ ಚಟುವಟಿಕೆಗಳಿಗಾಗಿ ಕರೆದುಕೊಂಡು ಹೋಗುವುದು. |

| | | | |
|---|---|---|---|
| 20 | ನಟರಾಜ್ | ಹೌಸಕೀಪರ್ | ಕೊಠಡಿಗಳನ್ನು ಸ್ವಚ್ಛಗೊಳಿಸುವ ಕರ್ತವ್ಯ ನಿರ್ವಹಿಸುವುದು. |
| 21 | ಕೆ.ಬಿ.ಪ್ರಭು | ಹೌಸಕೀಪರ್ | ಕೊಠಡಿಗಳನ್ನು ಸ್ವಚ್ಛಗೊಳಿಸುವ ಕರ್ತವ್ಯ ನಿರ್ವಹಿಸುವುದು. |
| 22 | ಜಯಮ್ಮ | ಹೌಸಕೀಪರ್ | ಕೊಠಡಿಗಳನ್ನು ಸ್ವಚ್ಛಗೊಳಿಸುವ ಕರ್ತವ್ಯ ನಿರ್ವಹಿಸುವುದು. |
| 23 | ಶಿವಣ್ಣ (ಡೋಬಿ) | ಹೌಸಕೀಪರ್ | ಕೊಠಡಿಗಳನ್ನು ಸ್ವಚ್ಛಗೊಳಿಸುವ ಕರ್ತವ್ಯ ನಿರ್ವಹಿಸುವುದು. |
| 24 | ಎನ್.ಬಿ.ಸ್ವಾಮಿ | ಹೌಸ್‌ಕೀಪರ್ | ಕೊಠಡಿಗಳನ್ನು ಸ್ವಚ್ಛಗೊಳಿಸುವ ಕರ್ತವ್ಯ ನಿರ್ವಹಿಸುವುದು. |
| 25 | ಪಿ.ಎಸ್. ಕೃಷ್ಣ | ಮೇಲ್ವಿಚಾರಕರು (ಫಿಷಿಂಗ್) | ಅತಿಥಿಗಳನ್ನು ದೋಣಿ ವಿಹಾರಕ್ಕೆ ಕರೆದುಕೊಂಡು ಹೋಗುವುದು. |
| 26 | ಎಸ್.ರಮೇಶ್ | ಬೇರರ್ ಕಂ ರೂಂಬಾಯ್ | ಅತಿಥಿಗಳಿಗೆ ಆಹಾರದ ಮತ್ತು ಇತರೆ ಅಗತ್ಯತೆಗಳ ಸರಬರಾಜು ಮಾಡುವುದು. |
| 27 | ಕೆ.ಶಾಂತ ಕುಮಾರ್ | ಬೇರರ್ ಕಂ ರೂಂ ಬಾಯ್ | ಅತಿಥಿಗಳಿಗೆ ಆಹಾರದ ಮತ್ತು ಇತರೆ ಅಗತ್ಯತೆಗಳ ಸರಬರಾಜು ಮಾಡುವುದು. |
| 28 | ರಂಗ ಮಾಗಳಿ | ಬೇರರ್ ಕಂ ರೂಂಬಾಯ್ | ಅತಿಥಿಗಳಿಗೆ ಆಹಾರದ ಮತ್ತು ಇತರೆ ಅಗತ್ಯತೆಗಳ ಸರಬರಾಜು ಮಾಡುವುದು. |
| 29 | ಎಂ.ರಾಜಾ | ಬೇರರ್ ಕಂ ರೂಂ ಬಾಯ್ | ಅತಿಥಿಗಳಿಗೆ ಆಹಾರದ ಮತ್ತು ಇತರೆ ಅಗತ್ಯತೆಗಳ ಸರಬರಾಜು ಮಾಡುವುದು. |
| 30 | ಮಂಜುನಾಥ್.ಬಿ | ಬೇರರ್/ರೂಂಬಾಯ್ | ಅತಿಥಿಗಳಿಗೆ ಆಹಾರದ ಮತ್ತು ಇತರೆ ಅಗತ್ಯತೆಗಳ ಸರಬರಾಜು ಮಾಡುವುದು. |
| 31 | ಕೆ.ಎಂ.ಕಮಲ | ಸಾಮಾನ್ಯ ಉಪಯುಕ್ತತೆ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 32 | ಸೋಮನಾಯಕ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 33 | ನಾಗರಾಜು | ಸಾಮಾನ್ಯ ಉಪಯುಕ್ತತೆ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 34 | ಸುಂದರ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 35 | ರವಿ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 36 | ಈರಮ್ಮ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 37 | ಗೌರಮ್ಮ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 38 | ಬಿ.ಟಿ.ವೆಂಕಟೇಶ್ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 39 | ವಿ.ಚೆಲುವರಾಜ್ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 40 | ಮಹದೇವನಾಯಕ | ಸಾಮಾನ್ಯ ಉಪಯುಕ್ತ ಕೆಲಸಗಾರರು (ಗ್ರೇಡ್-2) | ಘಟಕವನ್ನು ಸಂಪೂರ್ಣ ಸ್ವಚ್ಛವಾಗಿಡುವುದು. |
| 41 | ಕೃಷ್ಣಪ್ರಸಾದ್ | ಸಾಮಾನ್ಯ ಉಪಯುಕ್ತ | ಘಟಕವನ್ನು ಸಂಪೂರ್ಣ |

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **662**

ವಿಧಾನ ಸಭೆ ಸದಸ್ಯರ ಹೆಸರು : ಡಾ|| ರಂಗನಾಥ್ ಹೆಚ್. ಡಿ. (ಕುಣಿಗಲ್)

ಉತ್ತರಿಸಬೇಕಾದ ದಿನಾಂಕ : 16.12.2021

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಕುಣಿಗಲ್ ತಾಲೂಕಿನಾದ್ಯಂತ ಹಲವಾರು ಬಡ ಕುಟುಂಬಗಳ ರೇಷನ್ ಕಾರ್ಡ್‌ಗಳನ್ನು ರದ್ದುಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಇಲ್ಲ. |
| ಆ | ಬಂದಿದ್ದಲ್ಲಿ, ಎಷ್ಟು ಬಡ ಕುಟುಂಬಗಳ ರೇಷನ್ ಕಾರ್ಡ್‌ಗಳನ್ನು ರದ್ದುಗೊಳಿಸಲಾಗಿದೆ; ರದ್ದುಗೊಳಿಸಲು ಕಾರಣಗಳೇನು; (ವಿವರ ನೀಡುವುದು) | ಸರ್ಕಾರದ ಮಾನದಂಡಗಳನ್ವಯ ಪರಿಶೀಲನೆ ಮಾಡಿ ಅನರ್ಹ ಆದ್ಯತಾ/ಅಂತ್ಯೋದಯ ಪಡಿತರ ಚೀಟಿಗಳನ್ನು ಮಾತ್ರ ರದ್ದುಪಡಿಸಲಾಗಿದೆ. ವಿವರ ಈ ಕೆಳಕಂಡಂತಿದೆ:<br>• ಜನವರಿ-2021 ರಿಂದ ನವೆಂಬರ್ ಅಂತ್ಯದವರೆಗೆ 617 ಆದ್ಯತಾ ಪಡಿತರ ಚೀಟಿ ಮತ್ತು 4 ಅಂತ್ಯೋದಯ ಅನ್ನ ಪಡಿತರ ಚೀಟಿ, ಒಟ್ಟು 621 ಪಡಿತರ ಚೀಟಿಗಳನ್ನು ರದ್ದುಪಡಿಸಲಾಗಿದೆ.<br>• 804 ಆದ್ಯತಾ ಪಡಿತರ ಚೀಟಿಗಳನ್ನು ಆದ್ಯತೇತರ (ಎಪಿಎಲ್) ಪಡಿತರ ಚೀಟಿಗಳನ್ನಾಗಿ ಪರಿವರ್ತಿಸಲಾಗಿದೆ. ಇದರಲ್ಲಿ ಆದಾಯ ತೆರಿಗೆ ಪಾವತಿದಾರರು-618, 1.20 ಲಕ್ಷಕ್ಕಿಂತ ಹೆಚ್ಚಿನ ಆದಾಯ ಹೊಂದಿರುವ ಕುಟುಂಬಗಳು-65, 03 ಹೆಕ್ಟರ್ ಮೇಲ್ಪಟ್ಟು ಕೃಷಿ ಹೊಂದಿರುವ ಕುಟುಂಬಗಳು-121, ಎಲ್ಲಾ ಸೇರಿ ಒಟ್ಟು-804. |
| ಇ | ಬಡವರಿಗೆ ರೇಷನ್ ಕಾರ್ಡ್‌ಗಳನ್ನು ನೀಡಿರುವ ಕುರಿತು ಚಾಲ್ತಿಯಲ್ಲಿರುವ ಸರ್ಕಾರದ ಮಾರ್ಗಸೂಚಿಗಳು/ ನಿಯಮಗಳೇನು; (ವಿವರ ನೀಡುವುದು) | ರಾಜ್ಯದಲ್ಲಿ ಅಂತ್ಯೋದಯ ಅನ್ನ ಮತ್ತು ಆದ್ಯತಾ ಕುಟುಂಬಗಳನ್ನು ಗುರುತಿಸುವ ಬಗ್ಗೆ ರಾಜ್ಯ ಸರ್ಕಾರವು 2017 ರಲ್ಲಿ ಆದೇಶ ಹೊರಡಿಸಿದೆ. ಈ ಆದೇಶದ ಪ್ರಕಾರ ಅಂತ್ಯೋದಯ ಅನ್ನ ಮತ್ತು ಆದ್ಯತಾ(ಬಿ.ಪಿ.ಎಲ್) ಪಡಿತರ ಚೀಟಿಯನ್ನು ಹೊಂದಲು ನಿಗದಿಪಡಿಸಿರುವ ಮಾನದಂಡಗಳು ಕೆಳಕಂಡಂತಿವೆ. |

| | | |
|---|---|---|
| | | ➢ ವೇತನವನ್ನು ಗಣನೆಗೆ ತೆಗೆದುಕೊಳ್ಳದೆ ಎಲ್ಲಾ ಖಾಯಂ ನೌಕರರು ಅಂದರೆ ಸರ್ಕಾರದ ಅಥವಾ ಸರ್ಕಾರದಿಂದ ಅನುದಾನವನ್ನು ಪಡೆಯುತ್ತಿರುವ ಸಂಸ್ಥೆಗಳು ಅಥವಾ ಸರ್ಕಾರಿ ಪ್ರಾಯೋಜಿತ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳು/ಮಂಡಳಿಗಳು/ನಿಗಮಗಳು/ಸ್ವಾಯತ್ತ ಸಂಸ್ಥೆಗಳು ಇತ್ಯಾದಿ ಒಳಗೊಂಡಂತೆ ಆದಾಯ ತೆರಿಗೆ/ಸೇವಾ ತೆರಿಗೆ/ ವ್ಯಾಟ್/ವೃತ್ತಿ ತೆರಿಗೆ ಪಾವತಿಸುವ ಎಲ್ಲಾ ಕುಟುಂಬಗಳು.<br>➢ ಗ್ರಾಮೀಣ ಪ್ರದೇಶಗಳಲ್ಲಿ 03 ಹೆಕ್ಟರ್ ಒಣಭೂಮಿ ಅಥವಾ ತತ್ಸಮಾನ ನೀರಾವರಿ ಭೂಮಿ ಹೊಂದಿರುವ ಕುಟುಂಬಗಳು ಅಥವಾ ಗ್ರಾಮೀಣ ಪ್ರದೇಶವನ್ನು ಹೊರತುಪಡಿಸಿ ನಗರ ಪ್ರದೇಶಗಳಲ್ಲಿ 1000 ಚದರ ಅಡಿಗಿಂತಲೂ ಹೆಚ್ಚಿನ ವಿಸ್ತೀರ್ಣದ ಪಕ್ಕಾ ಮನೆಯನ್ನು ಸ್ವಂತವಾಗಿ ಹೊಂದಿರುವ ಕುಟುಂಬಗಳು.<br>➢ ಜೀವನೋಪಾಯಕ್ಕಾಗಿ ಸ್ವತಃ ಓಡಿಸುವ ಒಂದು ವಾಣಿಜ್ಯ ವಾಹನವನ್ನು ಅಂದರೆ ಟ್ರಾಕ್ಟರ್, ಮ್ಯಾಕ್ಸಿಕ್ಯಾಬ್, ಟ್ಯಾಕ್ಸಿ ಇತ್ಯಾದಿಗಳನ್ನು ಹೊಂದಿದ ಕುಟುಂಬವನ್ನು ಹೊರತುಪಡಿಸಿ ನಾಲ್ಕು ಚಕ್ರದ ವಾಹನಗಳನ್ನು ಹೊಂದಿರುವ ಎಲ್ಲಾ ಕುಟುಂಬಗಳು.<br>➢ ಕುಟುಂಬದ ವಾರ್ಷಿಕ ಆದಾಯವು ರೂ. 1.20 ಲಕ್ಷಗಳಿಗಿಂತಲೂ ಹೆಚ್ಚು ಇರುವ ಕುಟುಂಬಗಳು. |
| ಈ | ಜಂಟಿ ಖಾತೆಯನ್ನು ಹೊಂದಿರುವ ಕೆಲವೊಂದು ಕುಟುಂಬಗಳ ಜಮೀನುಗಳನ್ನು ಸಹ ಗಣನೆಗೆ ತೆಗೆದುಕೊಂಡು ಹಲವಾರು ಬಡ ಕುಟುಂಬಗಳ ರೇಷನ್ ಕಾರ್ಡ್‌ಗಳನ್ನು ರದ್ದುಗೊಳಿಸಲಾಗಿದ್ದು ಸರ್ಕಾರದ ಮಾರ್ಗಸೂಚಿಗಳನ್ವಯ ಇದು ಸರಿಯಾದ ಕ್ರಮವೇ; (ವಿವರ ನೀಡುವುದು) | ಕಂದಾಯ ಇಲಾಖೆಯ ಗ್ರಾಮ ಲೆಕ್ಕಾಧಿಕಾರಿಗಳು ಮತ್ತು ರಾಜಸ್ವ ನಿರೀಕ್ಷಕರುಗಳಿಂದ ಆಯಾ ಕುಟುಂಬ ಹೊಂದಿರುವ ಕೃಷಿ ಭೂಮಿಯ ಬಗ್ಗೆ ಲಿಖಿತ ವರದಿಯನ್ನು ಪಡೆದು, ಪರಿಶೀಲಿಸಿ 3 ಹೆಕ್ಟರ್‌ಗಿಂತ ಹೆಚ್ಚು ಕೃಷಿ ಭೂಮಿಯನ್ನು ಹೊಂದಿದ್ದು, ಒಂದೇ ಕುಟುಂಬದಲ್ಲಿ ವಾಸವಾಗಿರುವವರ ಪಡಿತರ ಚೀಟಿಗಳನ್ನು ಆದ್ಯತೇತರ ಪಡಿತರ ಚೀಟಿಗಳನ್ನಾಗಿ ಪರಿವರ್ತಿಸಲಾಗಿದೆ.<br>ಅದರಂತೆ, ಕುಣಿಗಲ್ ತಾಲ್ಲೂಕಿನಲ್ಲಿ 303 ಕುಟುಂಬಗಳು 3 ಹೆಕ್ಟರ್‌ಗಿಂತ ಹೆಚ್ಚಿನ ಕೃಷಿ ಭೂಮಿಯನ್ನು ಹೊಂದಿದ್ದಾರೆಂಬ ಮಾಹಿತಿಯನ್ನು ಕಂದಾಯ ಇಲಾಖೆಯಿಂದ ಪರಿಶೀಲನೆ ಮಾಡಿಸಿ, ಅದರಲ್ಲಿ 121 ಕುಟುಂಬಗಳ ಪಡಿತರ ಚೀಟಿಗಳನ್ನು ಆದ್ಯತೇತರ ಪಡಿತರ ಚೀಟಿಗಳನ್ನಾಗಿ ಪರಿವರ್ತಿಸಲಾಗಿದೆ. |

| | | |
|---|---|---|
| ಊ | ರೈತಾಪಿ ಹಾಗೂ ಕೂಲಿ ಕಾರ್ಮಿಕರ ಕುಟುಂಬಗಳ ಜೀವನವು ರೇಷನ್ ಕಾರ್ಡ್‌ಗಳಲ್ಲಿ ಸಿಗುವ ಅಕ್ಕಿ, ಬೇಳೆ, ದವಸ ಧಾನ್ಯಗಳ ಮೇಲೆ ಅವಲಂಬಿತವಾಗಿದ್ದು, ಈಗಿರುವ ಮಾರ್ಗಸೂಚಿಗಳನ್ನು ಇನ್ನಷ್ಟು ಸರಳೀಕರಿಸಿ, ಹೆಚ್ಚಿನ ಸಂಖ್ಯೆಯ ಬಡವರಿಗೆ ಅನುಕೂಲವಾಗುವಂತೆ ರೇಷನ್ ಕಾರ್ಡ್ ಮರು ಹಂಚಿಕೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದೇ? ( ಮಾಹಿತಿ ನೀಡುವುದು) | ಪ್ರಸ್ತಾವನೆ ಸರ್ಕಾರದ ಮುಂದೆ ಇರುವುದಿಲ್ಲ. |

**ಆನಾಸ 298 ಡಿಆರ್‌ಎ 2021 (ಇ-ಆಫೀಸ್)**

(ಉಮೇಶ ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

<u>ಕರ್ನಾಟಕ ವಿಧಾನ ಸಭೆ</u>

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : 663 |
| ಮಾನ್ಯ ಸದಸ್ಯರ ಹೆಸರು | : ಶ್ರೀ ರಂಗನಾಥ್ ಹೆಚ್.ಡಿ (ಕುಣಿಗಲ್) |
| ಉತ್ತರಿಸಬೇಕಾದ ದಿನಾಂಕ | : 16-12-2021 |
| ಉತ್ತರಿಸುವ ಸಚಿವರು | : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಆಸ್ಪತ್ರೆಗಳಲ್ಲಿ ಪಿಪಿಪಿ ಮಾದರಿಯಲ್ಲಿ ನಡೆಸಲಾಗುತ್ತಿರುವ ಎಂಆರ್ಐ/ ಸಿಟಿಸ್ಕ್ಯಾನ್/ ಎಕ್ಸ್‌ರೇಗಳಿಗೆ ಸರ್ಕಾರ ನಿಗಧಿಪಡಿಸಿರುವ ದರವೆಷ್ಟು?(ವಿವರ ನೀಡುವುದು)</td><td>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ವ್ಯಾಪ್ತಿಯಲ್ಲಿ ಬರುವ ಸರ್ಕಾರಿ ಆಸ್ಪತ್ರೆಗಳಲ್ಲಿ ಪಿಪಿಪಿ ಮಾದರಿಯಲ್ಲಿ ನಡೆಸಲಾಗುತ್ತಿರುವ ಎಂಆರ್ಐ/ ಸಿಟಿಸ್ಕ್ಯಾನ್/ ಎಕ್ಸ್‌ರೇಗಳಿಗೆ ಈ ಕೆಳಕಂಡಂತೆ ದರ ನಿಗದಿಪಡಿಸಲಾಗಿರುತ್ತದೆ:
<table>
<tr><th>ಕ್ರ. ಸಂ</th><th>ಪಿಪಿಪಿ ಮಾದರಿಯಲ್ಲಿ ಸೇವೆಯನ್ನು ಒದಗಿಸುತ್ತಿರುವ ಸಂಸ್ಥೆಯ ವಿವರ</th><th colspan="2">ರಾಷ್ಟ್ರೀಯ ಆರೋಗ್ಯ ಅಭಿಯಾ ದಿಂದ ನಿಗಧಿ ಪಡಿಸಿದ ದರ ರೂ. ಗಳಲ್ಲಿ</th><th colspan="2">ರಾಜ್ಯ ಸರ್ಕಾರದಿಂದ ನಿಗಧಿಪಡಿಸಿದ ದರ ರೂ. ಗಳಲ್ಲಿ</th><th>ಕ್ರೋಢಿಕರಿಸಿದ ಒಟ್ಟು ಮೊತ್ತ ರೂ. ಗಳಲ್ಲಿ</th></tr>
<tr><td rowspan="2">1</td><td rowspan="2">ಕ್ರಸ್ನ ಡಯೊಗ್ನೋಸ್ಟಿಕ್ಸ್ ಪ್ರೈ.ಲಿ</td><td>ಸಿ.ಟಿ ಸ್ಕ್ಯಾನ್</td><td>1000 /-</td><td>ಸಿ.ಟಿ ಸ್ಕ್ಯಾನ್</td><td>550/ -</td><td>15[illegible]0/-</td></tr>
<tr><td>ಎಂಆರ್ ಐ</td><td>2400 /-</td><td>ಎಂಆರ್ಐ</td><td>600/ -</td><td>3000/-</td></tr>
<tr><td rowspan="2">2.</td><td rowspan="2">ಕೆ.ವಿ.ಹಂಚಿನಾಳ್ ಗದಗ</td><td>ಸಿ.ಟಿ ಸ್ಕ್ಯಾನ್</td><td>1000 /-</td><td>ಸಿ.ಟಿ ಸ್ಕ್ಯಾನ್</td><td>500/ -</td><td>1500/-</td></tr>
<tr><td>ಎಂಆರ್ ಐ</td><td>2400 /-</td><td>ಎಂಆರ್ಐ</td><td>300/ -</td><td>2700/-</td></tr>
<tr><td rowspan="2">3</td><td rowspan="2">ಧನಲಕ್ಷ್ಮಿ ಡ್ರೆಸೆಸ್ಸ್ ಗದಗ, ಜಯನಗರ ಸಾರ್ವಜನಿಕ ಆಸ್ಪತ್ರೆ, ಬೆಂಗಳೂರು</td><td colspan="2">ಸಿ.ಟಿ ಸ್ಕ್ಯಾನ್</td><td colspan="2">ಸಿ.ಟಿ ಸ್ಕ್ಯಾನ್</td><td rowspan="2">1500/-</td></tr>
<tr><td colspan="2">1000/-</td><td colspan="2">500/-</td></tr>
</table>
<ul>
<li>ಎಕ್ಸ್‌ರೇ ಸೇವೆಗಳನ್ನು ಪಿಪಿಪಿ ಮಾದರಿಯಲ್ಲಿ ಅಳವಡಿಸಿರುವುದಿಲ್ಲ.</li>
<li>ಪ್ರತಿ ಎಕ್ಸ್‌ರೇ ಸೇವೆಗಳಗೆ (10"x 8", 15" x 12", 14" x 17")- ರೂ.50/-ನ್ನು ನಿಗದಿಪಡಿಸಲಾಗಿದೆ.</li>
</ul></td></tr>
<tr><td>ಆ</td><td>ಈ ಆಸ್ಪತ್ರೆಗಳಲ್ಲಿ ನಡೆಸಲಾಗುವ ಎಂಆರ್ಐ/ ಸಿಟಿ ಸ್ಕ್ಯಾನ್‌ಗಳಿಗೆ 15-20 ಸಾವಿರ ರೂಪಾಯಿಗಳವರೆಗೆ ಶುಲ್ಕ ಪಾವತಿಸಿಕೊಳ್ಳುತ್ತಿರುವುದಾಗಿ ಸಾರ್ವಜನಿಕ ದೂರುಗಳು ಕೇಳಿ ಬಂದಿದ್ದು, ಇದು ಸರ್ಕಾರದ ಗಮನಕ್ಕೆ ಬಂದಿಲ್ಲವೇ: ಇದರಿಂದಾಗಿ ರೈತರು, ಕೂಲಿ ಕಾರ್ಮಿಕರು ಹಾಗೂ ಕಡು ಬಡವರ ಶೋಷಣೆಯಾಗುತ್ತಿಲ್ಲವೇ:</td><td>ಬಂದಿಲ್ಲ.</td></tr>
</table>

| | | |
|---|---|---|
| ಇ | ಬಂದಿದ್ದಲ್ಲಿ ಎಂಆರ್‌ಟಿ/ಸಿಟಿ ಸ್ಕ್ಯಾನ್‌ಗಳಿಗೆ ಹೆಚ್ಚಿನ ದರ ವಸೂಲು ಮಾಡುತ್ತಿರುವ ಆಸ್ಪತ್ರೆಯ ಮುಖ್ಯಸ್ಥರು ಹಾಗೂ ಖಾಸಗಿ ಸಂಸ್ಥೆಗಳ ವಿರುದ್ಧ ಸರ್ಕಾರ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ; | ಅನ್ವಯಿಸುವುದಿಲ್ಲ. |
| ಈ | ಸರ್ಕಾರಿ ಆಸ್ಪತ್ರೆಗಳಲ್ಲಿ ಪಿಪಿಪಿ ಮಾದರಿಯನ್ನು ಹೊರತುಪಡಿಸಿ ಎಂಆರ್‌ಐ/ಸಿಟಿ ಸ್ಕ್ಯಾನ್/ ಎಕ್ಸ್‌ರೇ ಸೇವೆಗಳನ್ನು ಬಡವರಿಗೆ ಉಚಿತವಾಗಿ/ ರಿಯಾಯಿತಿ ದರದಲ್ಲಿ ಸರ್ಕಾರವೇ ನೇರವಾಗಿ ಒದಗಿಸಲು ಇರುವ ತೊಂದರೆಗಳೇನು? | ಎಂಆರ್‌ಐ/ಸಿಟಿ ಸ್ಕ್ಯಾನ್/ ಎಕ್ಸ್‌ರೇ ಸೇವೆಗಳನ್ನು ರಾಷ್ಟ್ರೀಯ ಆರೋಗ್ಯ ಅಭಿಯಾನದ ರಾಷ್ಟ್ರೀಯ ಉಚಿತ ರೋಗ ಪತ್ತೆ ಸೇವೆಗಳ ಕಾರ್ಯಕ್ರಮದ ಸಂಕಲನವು ಭಾರತ ಸರ್ಕಾರದ ಆರ್.ಒ.ಪಿ (Record of Proceedings)ಯ ನಿರ್ದೇಶನದಂತೆ ಪಿಪಿಪಿ ಮಾದರಿಯಲ್ಲಿಯೇ ಅಳವಡಿಸಲಾಗಿರುತ್ತದೆ. |

ಸಂಖ್ಯೆ: ಆಕುಕ 663 ಚುರಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 665
**ಸದಸ್ಯರ ಹೆಸರು** : ಶ್ರೀ ಡಾ. ರಂಗನಾಥ್ ಹೆಚ್.ಡಿ. (ಕುಣಿಗಲ್)
**ಉತ್ತರಿಸಬೇಕಾದ ದಿನಾಂಕ** : 16-12-2021
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ. | ಕುಣಿಗಲ್ ತಾಲ್ಲೂಕಿನಲ್ಲಿ ಪ್ರಾಥಮಿಕ ಶಾಲೆಗಳಿಗೆ 933 ಶಿಕ್ಷಕರ ಅಗತ್ಯತೆ ಇದ್ದು, 671 ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದಾರೆ. 262 ಶಿಕ್ಷಕರ ಕೊರತೆ ಇದೆ. ಪ್ರೌಢಶಾಲೆಗಳ ಪೈಕಿ 375 ಕ್ಕೆ 300 ಶಿಕ್ಷಕರು ಕಾರ್ಯ ನಿರ್ವಹಿಸುತ್ತಿದ್ದು, 75 ಶಿಕ್ಷಕರ ಕೊರತೆ ಇದ್ದು, ಕೊರತೆ ಇರುವ ಶಿಕ್ಷಕರ ಭರ್ತಿಗಾಗಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿನ ಶಿಕ್ಷಕರ ಕೊರತೆಯನ್ನು ನೀಗಿಸಲು ಶಿಕ್ಷಕರನ್ನು ಖಾಯಂ ಆಗಿ ನೇಮಕ ಮಾಡಿಕೊಳ್ಳುವವರೆಗೆ ಪ್ರಸಕ್ತ ಸಾಲಿನಲ್ಲಿ ತಾತ್ಕಾಲಿಕವಾಗಿ ಖಾಲಿ ಹುದ್ದೆಗಳಿಗೆ ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಲು ಮಂಜೂರಾತಿ ನೀಡಲಾಗಿರುತ್ತದೆ. ಅದರಂತೆ, ಮಕ್ಕಳ ಸಂಖ್ಯೆ ಹೆಚ್ಚಾಗಿರುವ ಶಾಲೆಗಳಲ್ಲಿನ ಶಿಕ್ಷಕರ ಕೊರತೆಯನ್ನು ನೀಗಿಸಲು ಪ್ರಾಥಮಿಕ ಶಾಲೆಗಳಿಗೆ 83 ಮತ್ತು ಪ್ರೌಢ ಶಾಲೆಗಳಿಗೆ 11 ಅತಿಥಿ ಶಿಕ್ಷಕರನ್ನು ನೇಮಿಸಿಕೊಳ್ಳಲಾಗಿದೆ.<br><br>ಪ್ರೌಢ ಶಾಲೆಗಳಲ್ಲಿನ ಖಾಲಿ ಹುದ್ದೆಗಳಿಗೆದುರಾಗಿ ತಾತ್ಕಾಲಿಕವಾಗಿ ಕುಣಿಗಲ್ ತಾಲ್ಲೂಕಿಗೆ ಒಟ್ಟು-11 ಅತಿಥಿ ಶಿಕ್ಷಕರನ್ನು ಹಂಚಿಕೆ ಮಾಡಲಾಗಿರುತ್ತದೆ. |
| ಆ. | ಖಾಲಿ ಇರುವ ಶಿಕ್ಷಕರ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು; | ಸರ್ಕಾರಿ ಪ್ರಾಥಮಿಕ ಶಾಲೆಗಳಿಗೆ ಸಂಬಂಧಿಸಿದಂತೆ ಹಾಗೂ ರಾಜ್ಯದಲ್ಲಿ ಕುಣಿಗಲ್ ತಾಲ್ಲೂಕು ಸೇರಿದಂತೆ 25,813 ಹುದ್ದೆಗಳು ಖಾಲಿಯಿದ್ದು ಇವುಗಳ ಪೈಕಿ 15,000 ಹುದ್ದೆಗಳಿಗೆ ಆರ್ಥಿಕ ಇಲಾಖೆಯು ಅನುಮೋದನೆ ನೀಡಿದ್ದು, ಶೀಘ್ರದಲ್ಲೇ ನೇಮಕಾತಿ ಅಧಿಸೂಚನೆ ಹೊರಡಿಸಲು ಕ್ರಮವಹಿಸಲಾಗುವುದು.<br><br>ರಾಜ್ಯದ ಸರ್ಕಾರಿ ಪ್ರೌಢ ಶಾಲೆಗಳಲ್ಲಿ ದಿನಾಂಕ 31.10.2021ರ ಅಂತ್ಯಕ್ಕೆ ಖಾಲಿ ಇದ್ದ ಪ್ರೌಢ ಶಾಲಾ ಶಿಕ್ಷಕರ ಒಟ್ಟು-5078 ಹುದ್ದೆಗಳಲ್ಲಿ ಒಟ್ಟು-2539 ಹುದ್ದೆಗಳನ್ನು ಬಡ್ತಿಗೆ ಕಾಯ್ದಿರಿಸಿ ಉಳಿದ ಒಟ್ಟು-2539 ಹುದ್ದೆಗಳನ್ನು ನೇರ ನೇಮಕಾತಿಯಿಂದ ಭರ್ತಿ ಮಾಡಲು ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗುತ್ತಿದೆ. |

| | | |
|---|---|---|
| ಇ. | ತಾಲ್ಲೂಕಿನಲ್ಲಿ ಶಿಕ್ಷಕರ ಕೊರತೆ ಎದ್ದು ಕಾಣುತ್ತಿದ್ದು, ವರ್ಗಾವಣೆಯಾಗಿ ಹೋಗಬಯಸುತ್ತಿರುವವರ ಸಂಖ್ಯೆ ಹೆಚ್ಚಾಗಿದ್ದು, ವರ್ಗಾವಣೆ ಬಯಸಿ ತಾಲ್ಲೂಕಿಗೆ ಬರುವವರ ಸಂಖ್ಯೆಯು ಕಡಿಮೆಯಾಗಿರುವುದರಿಂದ ಶಿಕ್ಷಕರ ಹೊಂದಾಣಿಕೆ ಕಾರ್ಯವನ್ನು ಯಾವ ರೀತಿ ನಿಭಾಯಿಸಲಾಗುತ್ತಿದೆ? (ಮಾಹಿತಿ ನೀಡುವುದು) | ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳಿಗೆ ತಾತ್ಕಾಲಿಕವಾಗಿ ಅತಿಥಿ ಶಿಕ್ಷಕರನ್ನು ನೇಮಕ ಮಾಡಿಕೊಳ್ಳಲಾಗಿದೆ. ಹಾಗೂ ಕಾರ್ಯಭಾರವಿಲ್ಲದ ಶಾಲೆಗಳಿಂದ ಶಿಕ್ಷಕರನ್ನು ಅವಶ್ಯಕತೆಇರುವ ಶಾಲೆಗಳಿಗೆ ಮಕ್ಕಳ ಶೈಕ್ಷಣಿಕ ಹಿತದೃಷ್ಟಿಯನ್ನು ಗಮನದಲ್ಲಿಸಿರುಕೊಂಡು ತಾತ್ಕಾಲಿಕವಾಗಿ ನಿಯೋಜನೆ ಮಾಡಿಕೊಂಡು ಶಿಕ್ಷಕರ ಹೊಂದಾಣಿಕೆಕಾರ್ಯವನ್ನು ನಿಭಾಯಿಸಲಾಗುತ್ತಿದೆ.<br><br>ರಾಜ್ಯದ ಸರ್ಕಾರಿ ಪ್ರೌಢ ಶಾಲೆಗಳಲ್ಲಿನ ಖಾಲಿ ಹುದ್ದೆಗಳಿಗೆದುರಾಗಿ ತಾತ್ಕಾಲಿಕವಾಗಿ ಒಟ್ಟು 5078 ಅತಿಥಿ ಶಿಕ್ಷಕರುಗಳನ್ನು ನೇಮಕಾತಿ ಮಾಡಿಕೊಳ್ಳುವ ಮೂಲಕ ಶಿಕ್ಷಕರ ಕೊರತೆಯನ್ನು ನೀಗಿಸಲಾಗುತ್ತಿದೆ. |

ಇಪಿ 253 ಪಿಎಂಸಿ 2021

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 666**
**ಸದಸ್ಯರ ಹೆಸರು : ಡಾ॥ ರಂಗನಾಥ್ ಹೆಚ್.ಡಿ. (ಕುಣಿಗಲ್)**
**ಉತ್ತರಿಸಬೇಕಾದ ದಿನಾಂಕ : 16.12.2021**
**ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

<table>
<tr><th>ಕ್ರಸ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಕುಣಿಗಲ್ ತಾಲ್ಲೂಕಿನಲ್ಲಿ 334 ಹಿರಿಯ /ಕಿರಿಯ ಪ್ರಾಥಮಿಕ ಶಾಲೆ ಮತ್ತು 30 ಪ್ರೌಢ ಶಾಲೆಗಳಿದ್ದು, 40 ಶಾಲೆಗಳ 56 ನೂತನ ಹೆಚ್ಚುವರಿ ಕೊಠಡಿಗಳ ನಿರ್ಮಾಣಕ್ಕಾಗಿ ರೂ.6.16 ಕೋಟಿಗಳಿಗೆ ಮತ್ತು 62 ಶಾಲೆಗಳ 16637 ಮೀಟರ್ ಆವರಣಗೋಡೆ ನಿರ್ಮಾಣಕ್ಕಾಗಿ ರೂ.9.00 ಕೋಟಿಗಳಿಗೆ ಬೇಡಿಕೆ ಸಲ್ಲಿಸಲಾಗಿದ್ದು, ಅನುದಾನ ಬಿಡುಗಡೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;</td><td>ವಿವಿಧ ಯೋಜನೆಗಳಡಿಯಲ್ಲಿ ಕುಣಿಗಲ್ ತಾಲ್ಲೂಕಿನ ಶಾಲೆಗಳಿಗೆ ಈ ಕೆಳಕಂಡಂತೆ ಅನುದಾನ ಬಿಡುಗಡೆಯಾಗಿರುತ್ತದೆ.
<table>
<tr><th>ವರ್ಷ</th><th>ಶಾಲೆಗಳ ಸಂಖ್ಯೆ</th><th>ಕೊಠಡಿಗಳ ಸಂಖ್ಯೆ</th><th>ನಿಗದಿ ಯಾದ ಅನುದಾನ (ರೂ. ಲಕ್ಷಗಳಲ್ಲಿ)</th><th>ಬಿಡುಗಡೆ ಯಾದ ಅನುದಾನ (ರೂ. ಲಕ್ಷಗಳಲ್ಲಿ)</th></tr>
<tr><td>2018-19</td><td>06</td><td>07</td><td>89.65</td><td>73.79</td></tr>
<tr><td>2019-20</td><td>4</td><td>4</td><td>52.70</td><td>52.70</td></tr>
<tr><td>2020-21</td><td>34</td><td>55</td><td>682.40</td><td>527.26</td></tr>
<tr><td>ಒಟ್ಟು</td><td>44</td><td>66</td><td>824.75</td><td>653.75</td></tr>
</table>
ಕುಣಿಗಲ್ ತಾಲ್ಲೂಕಿನ 121 ಶಾಲೆಗಳ ಕಾಂಪೌಂಡ್ ಗೋಡೆ ನಿರ್ಮಾಣ ಮಾಡಲು ಪ್ರಸ್ತಾವನೆಯನ್ನು ಜಿಲ್ಲಾ ಪಂಚಾಯಿತಿಗೆ ಕ್ರಿಯಾಯೋಜನೆ ಸಲ್ಲಿಸಲಾಗಿದೆ.<br>ಮಹಾತ್ಮಾ ಗಾಂಧಿ ನರೇಗಾ ಯೋಜನೆ ಅಡಿಯಲ್ಲಿ ಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು 14 ಮತ್ತು 15ನೇ ಹಣಕಾಸು ಆಯೋಗದಲ್ಲಿ ಸಂಬಂಧಿಸಿದ ಗ್ರಾಮ ಪಂಚಾಯತಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕ್ರಮವಹಿಸಿ ಅನುದಾನ ಹಂಚಿಕೆ ಮಾಡಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ದಿನಾಂಕ:09.12.2021 ರಂದು ಪತ್ರ ಬರೆಯಲಾಗಿದೆ.<br>ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ ಆದ್ಯತೆ ಮೇರೆಗೆ ಕುಣಿಗಲ್ ತಾಲ್ಲೂಕು ಒಳಗೊಂಡಂತೆ ಹಂತಹಂತವಾಗಿ ರಾಜ್ಯದಾದ್ಯಂತ ಶಾಲಾ ಕೊಠಡಿ/ಶೌಚಾಲಯ ದುರಸ್ಥಿ ಕಾರ್ಯಕೈಗೊಳ್ಳಲು ಕ್ರಮವಹಿಸಲಾಗುತ್ತಿದೆ.</td></tr>
<tr><td>ಆ)</td><td>ತಾಲ್ಲೂಕಿನ ಒಟ್ಟು ಶಾಲೆಗಳ ಪೈಕಿ 120 ಬಾಲಕರ ಮತ್ತು 92 ಬಾಲಕಿಯರ ಶೌಚಾಲಯಗಳ ನಿರ್ಮಾಣವಾಗಬೇಕಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು;</td><td>2020-21ನೇ ಸಾಲಿನಲ್ಲಿ ಕುಣಿಗಲ್ ತಾಲ್ಲೂಕಿನ 03 ಶಾಲೆಗಳಲ್ಲಿ 03 ಶೌಚಾಲಯಗಳನ್ನು ನಿರ್ಮಿಸಲು ರೂ.9.00 ಲಕ್ಷಗಳ ಅನುದಾನ ಬಿಡುಗಡೆಯಾಗಿರುತ್ತದೆ.<br>ಮಹಾತ್ಮಾ ಗಾಂಧಿ ನರೇಗಾ ಯೋಜನೆ ಅಡಿಯಲ್ಲಿ ಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು 14 ಮತ್ತು 15ನೇ ಹಣಕಾಸು ಆಯೋಗದಲ್ಲಿ ಸಂಬಂಧಿಸಿದ ಗ್ರಾಮ ಪಂಚಾಯತಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನೆಲೆಯಲ್ಲಿ ಕ್ರಮವಹಿಸಿ ಅನುದಾನ ಹಂಚಿಕೆ ಮಾಡಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ದಿನಾಂಕ:09.12.2021 ರಂದು ಪತ್ರ ಬರೆಯಲಾಗಿದ್ದು, ರಾಜ್ಯದ ಎಲ್ಲಾ ಶಾಲೆಗಳಿಗೆ ಶೌಚಾಲಯಗಳನ್ನು ಒದಗಿಸಲು ಅಗತ್ಯ ಕ್ರಮವಹಿಸಲಾಗುತ್ತಿದೆ.</td></tr>
</table>

| | | |
|---|---|---|
| ಇ) | 20 ಶಾಲೆಗಳ ಆವರಣದಲ್ಲಿ ವಿದ್ಯುತ್ ತಂತಿಗಳು ಹಾದು ಹೋಗಿದ್ದು, 08 ಶಾಲೆಗಳಲ್ಲಿ ವಿದ್ಯುತ್ ತಂತಿಗಳ ಬದಲಾವಣೆ ಕಾರ್ಯವಾಗಬೇಕಿದ್ದು, ತಂತಿಗಳ ತೆರವಿಗೆ ಇಲಾಖೆ ಕೈಗೊಂಡಿರುವ ಕ್ರಮಗಳೇನು; | ಇಂಧನ ಇಲಾಖೆಯು, ಇವರು ಶಾಲಾ ಕಾಲೇಜುಗಳ ಮೇಲೆ/ಆವರಣದಲ್ಲಿ ಹಾದು ಹೋಗಿರುವ ವಿದ್ಯುತ್ ಮಾರ್ಗಗಳನ್ನು ಸ್ಥಳಾಂತರಿಸಲು/ಎ.ಬಿ ಕೇಬಲ್ ಅಳವಡಿಸಲು ಕಾಲಮಿತಿ ನಿಗದಿಗೊಳಿಸಿ ಸುತ್ತೋಲೆಯನ್ನು ಹೊರಡಿಸುವಂತೆ ಇಂಧನ ಇಲಾಖೆಯ ಎಲ್ಲಾ ವ್ಯವಸ್ಥಾಪಕ ನಿರ್ದೇಶಕರುಗಳಿಗೆ ಸೂಚಿಸಿದೆ.<br>• ಇದರನ್ವಯ, ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು, ಇವರು ಶಾಲೆ ಮತ್ತು ಕಾಲೇಜು ಆವರಣದಲ್ಲಿ ಹಾದು ಹೋಗಿರುವ ವಿದ್ಯುತ್ ಮಾರ್ಗಗಳನ್ನು ಸ್ಥಳಾಂತರಿಸುವ ಬಗ್ಗೆ ಉಪನಿರ್ದೇಶಕರು (ಆಡಳಿತ), ಇವರುಗಳಿಗೆ ಸೂಚಿಸಲಾಗಿದೆ (**ಅನುಬಂಧ-1** ರಲ್ಲಿ ಮಾಹಿತಿ ಒದಗಿಸಿದೆ).<br>• ಶಾಲೆಗಳ ಆವರಣದಲ್ಲಿ ಹಾದು ಹೋಗಿರುವ ವಿದ್ಯುತ್ ತಂತಿಗಳ ತೆರವು ಮಾಡಲು ಅಧೀಕ್ಷಕ ಇಂಜಿನಿಯರ್, ಬೆಸ್ಕಾಂ, ತುಮಕೂರು ರವರನ್ನು ಕೋರಲಾಗಿದ್ದು, ಪ್ರಸ್ತುತ ಕುಣಿಗಲ್ ತಾಲ್ಲೂಕಿನ 04 ಶಾಲೆಗಳ ವಿದ್ಯುತ್ ತಂತಿ ತೆರವು ಮಾಡಲಾಗಿದೆ. ಉಳಿದ ಶಾಲೆಗಳ ವಿದ್ಯುತ್ ತಂತಿಗಳ ತೆರವು ಆಗಬೇಕಿದೆ. |
| ಈ) | 44 ಶಾಲೆಗಳ 88 ಕೊಠಡಿಗಳು ಶಿಥಿಲವಾಗಿದ್ದು, ಕಟ್ಟಡಗಳ ನಿರ್ಮಾಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಮಾಹಿತಿ ನೀಡುವುದು) | 2021-22ನೇ ಸಾಲಿನಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಾಲಾ ಕೊಠಡಿಗಳ ತುರ್ತು ದುರಸ್ಥಿ ಯೋಜನೆಯಡಿಯಲ್ಲಿ ಕುಣಿಗಲ್ ತಾಲ್ಲೂಕಿನ 20 ಶಾಲೆಗಳ 47 ಕೊಠಡಿಗಳಿಗೆ ಒಟ್ಟು ರೂ. 52.00 ಲಕ್ಷಗಳ ಅನುದಾನ ಬಿಡುಗಡೆಯಾಗಿದೆ.<br>• 2021-22ನೇ ಸಾಲಿನ ಅಮೃತ ಶಾಲಾ ಸೌಲಭ್ಯ ಯೋಜನೆಯಡಿ ಕುಣಿಗಲ್ ತಾಲ್ಲೂಕಿನ 4 ಸರ್ಕಾರಿ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ತಲಾ 10.00 ಲಕ್ಷಗಳಂತೆ ರೂ.40.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br>• 2021-22ನೇ ಸಾಲಿನ ರಾಜ್ಯ ಸರ್ಕಾರದ ಬಂಡವಾಳ ವೆಚ್ಚ ಯೋಜನೆಯಡಿ ಕುಣಿಗಲ್ ವಿಧಾನ ಸಭಾ ಕ್ಷೇತ್ರದ ಸರ್ಕಾರಿ ಶಾಲಾ ಕಟ್ಟಡಗಳ ದುರಸ್ಥಿಗೆ ರೂ.6.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಅನುದಾನವನ್ನು ಗರಿಷ್ಠ ಶಾಲೆಗಳಲ್ಲಿ ದುರಸ್ಥಿ ಕಾರ್ಯ ವಿಸ್ತರಿಸಲು ಸ್ಥಳೀಯವಾಗಿ ಜಾರಿಯಲ್ಲಿರುವ ವಿವಿಧ ಅಭಿವೃದ್ಧಿ ಯೋಜನೆಗಳ ಅನುದಾನವನ್ನು ಒಗ್ಗೂಡಿಸುವಿಕೆ (convergence) ಮೂಲಕ ಅನುಷ್ಠಾನಕ್ಕಾಗಿ ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯನುಷ್ಠಾನ ಸಮಿತಿಯನ್ನು ರಚಿಸಿ ಶೀಘ್ರವಾಗಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.<br>• ಶಾಲಾ ಕಟ್ಟಡಗಳ ದುರಸ್ಥಿಗಾಗಿ ರಾಜ್ಯ/ಜಿಲ್ಲಾ ವಿಪತ್ತು ನಿರ್ವಹಣಾ ನಿಧಿಯಡಿ ಹಾಗೂ ಇತರೆ ಲಭ್ಯವಿರುವ ಅನುದಾನ (ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆ ಡಿ.ಎಂ.ಎಫ್ ಯೋಜನೆ ಮತ್ತು ಜಿಲ್ಲಾ ಪಂಚಾಯತ್ ಸೇರ್ಪಡೆ ಹಾಗೂ ಮಾರ್ಪಾಡು |

| | | |
|---|---|---|
| | | ಯೋಜನೆಗಳಡಿ) ಬಿಡುಗಡೆ ಮಾಡಲು ಆಯಾ ಜಿಲ್ಲಾಧಿಕಾರಿಗಳಿಗೆ ಮತ್ತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ಶಾಲಾ ಕಟ್ಟಡಗಳ ದುರಸ್ಥಿಯನ್ನು ಶೀಘ್ರವಾಗಿ ಕೈಗೊಳ್ಳುವಂತೆ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರ ಸುತ್ತೋಲೆ ದಿನಾಂಕ:19.11.2021ರಲ್ಲಿ ರಾಜ್ಯದ ಎಲ್ಲಾ ಉಪನಿರ್ದೇಶಕರು (ಆಡಳಿತ) ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ನಿರ್ದೇಶಿಸಲಾಗಿದೆ. |
| ಉ) | ಕಳೆದ 18 ತಿಂಗಳುಗಳಿಂದ ಶಾಲೆಗಳು ಪ್ರಾರಂಭವಾಗದ ಕಾರಣ, ಗ್ರಾಮಾಂತರ ಪ್ರದೇಶದ ಶಾಲೆಗಳು ನಿರ್ವಹಣೆಯ ಕೊರತೆಯನ್ನು ಎದುರಿಸುತ್ತಿದ್ದು, ಈ ಶಾಲೆಗಳ ನಿರ್ವಹಣೆಗೆ ಸರ್ಕಾರ ಯಾವ ರೀತಿಯ ಕ್ರಮಗಳನ್ನು ಕೈಗೊಂಡಿದೆ? (ಮಾಹಿತಿ ನೀಡುವುದು) | 2020-21ನೇ ಸಾಲಿನಲ್ಲಿ ಕುಣಿಗಲ್ ತಾಲ್ಲೂಕಿನ ಸರ್ಕಾರಿ ಶಾಲೆಗಳ ನಿರ್ವಹಣೆಗಾಗಿ ಒಟ್ಟು ರೂ.2235780.00 (ಇಪ್ಪತ್ತೆರಡು ಲಕ್ಷದ ಮೂವತ್ತೈದು ಸಾವಿರದ ಏಳುನೂರ ಎಂಭತ್ತು ರೂಪಾಯಿಗಳು ಮಾತ್ರ) ಗಳ ಅನುದಾನ ಬಿಡುಗಡೆಯಾಗಿರುತ್ತದೆ. |

| ಕ್ರ ಸಂ | ಶಾಲೆ | ಪ್ರತಿ ಶಾಲೆಗೆ ನಿಗದಿಯಾದ ಅನುದಾನ (ರೂ.ಗಳಲ್ಲಿ) | ಶಾಲೆಗಳ ಸಂಖ್ಯೆ | ಬಿಡುಗಡೆಯಾದ ಅನುದಾನ (ರೂ.ಗಳಲ್ಲಿ) |
|---|---|---|---|---|
| 1 | ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳು | 5400.00 | 225 | 1215000.00 |
| 2 | ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳು | 6790.00 | 122 | 828380.00 |
| 3 | ಸರ್ಕಾರಿ ಪ್ರೌಢ ಶಾಲೆಗಳು | 7400.00 | 26 | 192400.00 |
| | | ಒಟ್ಟು | 373 | 22,35,780.00 |

**ಇಪಿ: 295 ಯೋಸಕ 2021**

(ಬಿ.ಸಿ.ನಾಗೇಶ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

LHQ-666

ಅನುಬಂಧ - 1

ಕರ್ನಾಟಕ ಸರ್ಕಾರ

ಸಾರ್ವಜನಿಕ ಶಿಕ್ಷಣ ಇಲಾಖೆಯ ಆಯುಕ್ತರ ಕಛೇರಿ, ನೃಪತುಂಗ ರಸ್ತೆ, ಬೆಂಗಳೂರು

ಸಂಖ್ಯೆ:ಎಡಿಎಂ-2(4)/ಶಾ.ಆ.ವಿ-31/2021-22 ದಿನಾಂಕ.13-09-2021

-: ಸುತ್ತೋಲೆ :-

ವಿಷಯ:- ಶಾಲೆ ಮತ್ತು ಕಾಲೇಜು ಆವರಣದಲ್ಲಿ ಹಾದು ಹೋಗಿರುವ ವಿದ್ಯುತ್ ಮಾರ್ಗಗಳನ್ನು ಸ್ಥಳಾಂತರಿಸುವ ಬಗ್ಗೆ.

ಉಲ್ಲೇಖ:-1. ಸರ್ಕಾರದ ಪತ್ರ ಸಂಖ್ಯೆ: ಎನರ್ಜಿ 603 ವಿಎಸ್‌ಎಲ್ 2021, ದಿನಾಂಕ.06-09-2021.
2. ದಿನಾಂಕ.15-08-2021 ರ ಸ್ವಾತಂತ್ರ್ಯ ದಿನಾಚರಣೋತ್ಸವ ಸಂದರ್ಭ ತುಮಕೂರು ಜಿಲ್ಲೆ ಇಲ್ಲಿ ವಿದ್ಯುತ್ ಸಂಪರ್ಕದಿಂದ ಆದ ದುರ್ಘಟನೆಯ ಹಿನ್ನಲೆಯಲ್ಲಿ.

*****

ವಿಷಯ ಮತ್ತು ಉಲ್ಲೇಖಕ್ಕೆ ಸಂಬಂಧಿಸಿದಂತೆ ಸರ್ಕಾರಿ, ಅನುದಾನಿತ ಮತ್ತು ಅನುದಾನರಹಿತ ಶಾಲೆಗಳ ಮತ್ತು ವಿದ್ಯಾರ್ಥಿಗಳ ಹಾಗೂ ಶಿಕ್ಷಕರ ಪ್ರಾಣ ಮತ್ತು ಆಸ್ತಿಗೆ ರಕ್ಷಣೆ ಒದಗಿಸುವುದು ಶಾಲಾ ಮುಖ್ಯಸ್ಥರ ಹಾಗೂ ಇಲಾಖಾ ಅಧಿಕಾರಿಗಳ ಆದ್ಯ ಕರ್ತವ್ಯವಾಗಿರುತ್ತದೆ.

ಉಲ್ಲೇಖಿತ ಸರ್ಕಾರದ ಪತ್ರದಲ್ಲಿ ತಿಳಿಸಿರುವಂತೆ ಸ್ವಾತಂತ್ರ್ಯ ದಿನಾಚರಣೆ ಸಂದರ್ಭದಲ್ಲಿ ವಿದ್ಯುತ್ ತಂತಿ ತಗುಲಿ, ವಿದ್ಯಾರ್ಥಿಯೊಬ್ಬರು ಮೃತಪಟ್ಟಿರುವುದು ವರದಿಯಾಗಿರುತ್ತದೆ. ಆದ್ದರಿಂದ ಶಾಲಾ ಕಾಲೇಜುಗಳ ತರಗತಿಗಳ ಕೊಠಡಿ, ಆವರಣ ಮತ್ತು ಜಮೀನಿನಲ್ಲಿರುವ ಮೊಬೈಲ್ ಟವರ್ ಮತ್ತು ವಿದ್ಯುತ್ ಮಾರ್ಗಗಳನ್ನು ಬೇರೆಡೆಗೆ ಸ್ಥಳಾಂತರಿಸುವುದು/ಎ.ಬಿ ಕೇಬಲ್‌ಗಳನ್ನು ಅಳವಡಿಸುವ ಅಗತ್ಯವಿದೆ.

ಈ ಸಂಬಂಧ ರಾಜ್ಯದ ಎಲ್ಲಾ ತಾಲ್ಲೂಕು ಮತ್ತು ವಲಯದ ಹಂತಗಳಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಸಿ.ಆರ್.ಪಿ/ಬಿ.ಆರ್.ಪಿ.ಗಳ ತಂಡಗಳನ್ನು ರಚಿಸಿ, ಈ ಪತ್ರದೊಂದಿಗೆ ಲಗತ್ತಿಸಿರುವ ನಮೂನೆಯಲ್ಲಿ ಪ್ರಕರಣವನ್ನು ತಾಲ್ಲೂಕು ಮತ್ತು ವಲಯವಾರು ಕ್ರೋಢೀಕರಣಗೊಳಿಸಿ, ಇಂಧನ ಇಲಾಖೆಯ ಮೇಲಧಿಕಾರಿಗಳ ಗಮನಕ್ಕೆ ತಂದು ವಿದ್ಯುತ್ ಮಾರ್ಗಗಳನ್ನು ಮತ್ತು ಮೊಬೈಲ್ ಟವರ್‌ಗಳನ್ನು ಸ್ಥಳಾಂತರಿಸಲು/ ಎ.ಬಿ ಕೇಬಲ್‌ಗಳನ್ನು ಅಳವಡಿಸಲು ಆದ್ಯತೆಯ ಮೇರೆಗೆ ಕ್ರಮವಹಿಸುವುದು.

ಕ್ರಮ ವಹಿಸಿರುವ ಮಾಹಿತಿಯನ್ನು ಜಿಲ್ಲಾ ಉಪನಿರ್ದೇಶಕರು(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ, ಇವರು ಕ್ರೋಢೀಕರಿಸಿ ಈ ಕಛೇರಿಗೆ ಸಲ್ಲಿಸುವುದು.

ಇಂತಹ ಪ್ರಕರಣಗಳು ಕ್ರಮವಹಿಸದೇ ಬಾಕಿ ಉಳಿದಲ್ಲಿ, ಮೇಲಧಿಕಾರಿಗಳ ತಪಾಸಣಾ ಸಮಯದಲ್ಲಿ ಕಂಡುಬಂದಲ್ಲಿ ತಮ್ಮ ಮೇಲೆ ನಿಯಮಾನುಸಾರ ಶಿಸ್ತು ಕ್ರಮ ವಹಿಸಲಾಗುವುದು, ಇದಕ್ಕೆ ಆಸ್ಪದ ನೀಡದಂತೆ ಶಾಲಾ ಮುಖ್ಯ ಶಿಕ್ಷಕರು, ಕ್ಷೇತ್ರ ಶಿಕ್ಷಣಾಧಿಕಾರಿಗಳು ಹಾಗೂ ಉಪನಿರ್ದೇಶಕರು ಕೂಡಲೇ ಕ್ರಮ ವಹಿಸಲು ತಿಳಿಸಿದೆ.

ಆಯುಕ್ತರು
ಸಾರ್ವಜನಿಕ ಶಿಕ್ಷಣ ಇಲಾಖೆ

ಇವರಿಗೆ,

1.ರಾಜ್ಯದ ಎಲ್ಲಾ ಉಪನಿರ್ದೇಶಕರು(ಆಡಳಿತ) ಸಾರ್ವಜನಿಕ ಶಿಕ್ಷಣ ಇಲಾಖೆ ಇವರಿಗೆ ಅಗತ್ಯ ಕ್ರಮಕ್ಕಾಗಿ.
2.ರಾಜ್ಯದ ಎಲ್ಲಾ ಕ್ಷೇತ್ರ ಶಿಕ್ಷಣಾಧಿಕಾರಿಗಳು (ಉಪನಿರ್ದೇಶಕರುಗಳ ಮುಖಾಂತರ) ಇವರಿಗೆ ಅಗತ್ಯ ಕ್ರಮಕ್ಕಾಗಿ.
3.ಸಂಬಂಧಿಸಿದ ಶಾಲೆಯ ಮುಖ್ಯ ಶಿಕ್ಷಕರುಗಳಿಗೆ ಅಗತ್ಯ ಕ್ರಮಕ್ಕಾಗಿ (ಕ್ಷೇತ್ರ ಶಿಕ್ಷಣಾಧಿಕಾರಿಗಳ ಮೂಲಕ).

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 667
ಮಾನ್ಯ ಸದಸ್ಯರ ಹೆಸರು : ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ)
ಉತ್ತರಿಸಬೇಕಾದ ದಿನಾಂಕ : 16-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಸಚಿವರು

* * *

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ಗುತ್ತಿಗೆ ಆಧಾರದ ಮೇಲೆ ಕರ್ತವ್ಯ ನಿರ್ವಹಿಸುತ್ತಿರುವ ತಜ್ಞ ವೈದ್ಯರು ಎಷ್ಟು;(ಪೂರ್ಣ ವಿವರ ನೀಡುವುದು) | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳಲ್ಲಿ ಗುತ್ತಿಗೆ ಆಧಾರದ ಮೇಲೆ ತಜ್ಞ ವೈದ್ಯರು ಕರ್ತವ್ಯ ನಿರ್ವಹಿಸುತ್ತಿಲ್ಲ. ಆದರೆ, ರಾಷ್ಟ್ರೀಯ ಆರೋಗ್ಯ ಅಭಿಯಾನ ಆಯುಷ್ ಕಾರ್ಯಕ್ರಮದಡಿಯಲ್ಲಿ 26 ತಜ್ಞ ವೈದ್ಯರುಗಳ ಹುದ್ದೆ ಅನುಮೋದನೆಯಾಗಿದ್ದು, ಪ್ರಸ್ತುತ 13 ಜಿಲ್ಲೆಗಳಲ್ಲಿ 22 ತಜ್ಞ ವೈದ್ಯರುಗಳು ಹಾಗೂ ಕೇಂದ್ರ ಪುರಸ್ಕೃತ ಯೋಜನೆಯಾದ ರಾಷ್ಟ್ರೀಯ ಆಯುಷ್ ಅಭಿಯಾನದಡಿಯಲ್ಲಿ 131 ತಜ್ಞ ವೈದ್ಯರುಗಳು ವಿವಿಧ ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ವಿವರವನ್ನು **ಅನುಬಂಧ**ದಲ್ಲಿರಿಸಿದೆ. |
| ಆ | ತಾಲ್ಲೂಕು ಆಯುಷ್ ಆಸ್ಪತ್ರೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಗುತ್ತಿಗೆ ತಜ್ಞ ವೈದ್ಯರುಗಳ ಸೇವೆ ಸಾರ್ವಜನಿಕರಿಗೆ ಉಪಯೋಗವಾಗುತ್ತಿದೆಯೇ; | ಹೌದು.<br>ತಜ್ಞ ವೈದ್ಯರುಗಳ ಸೇವೆ ಸಾರ್ವಜನಿಕರಿಗೆ ಸಮರ್ಪಕವಾಗಿ ದೊರೆಯುತ್ತಿದೆ. |
| ಇ | ಆಯುಷ್ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ರಾಜ್ಯದ ಎಲ್ಲಾ ತಾಲ್ಲೂಕು/ಜಿಲ್ಲಾ ಮಟ್ಟದಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ತಜ್ಞ ವೈದ್ಯರ ಸೇವೆಯನ್ನು ಖಾಯಂಗೊಳಿಸುವ ಪ್ರಕ್ರಿಯೆ ಸರ್ಕಾರದ ಹಂತದಲ್ಲಿದೆಯೇ; | ರಾಷ್ಟ್ರೀಯ ಆಯುಷ್ ಮಿಷನ್ ಯೋಜನೆಯು ಕೇಂದ್ರ ಸರ್ಕಾರದ ತಾತ್ಕಾಲಿಕ ಯೋಜನೆಯಾಗಿದ್ದು, ಈ ಯೋಜನೆಯಡಿ ಸೃಜಿಸಲಾದ ಹುದ್ದೆಗಳು ಸಂಪೂರ್ಣವಾಗಿ ತಾತ್ಕಾಲಿಕವಾಗಿದ್ದು, ಈ ಹುದ್ದೆಗಳು ಯೋಜನೆಯು ಚಾಲ್ತಿಯಲ್ಲಿರುವವರೆಗೆ ಮಾತ್ರ ಇರುತ್ತವೆ. ಈ ಹುದ್ದೆಗಳಿಗೆ ತಜ್ಞ ವೈದ್ಯರುಗಳನ್ನು ತಾತ್ಕಾಲಿಕ ಆಧಾರದ ಮೇಲೆ ಕನಿಷ್ಟ 11 ತಿಂಗಳ ಅವಧಿಗೆ ನೇಮಕ ಮಾಡಿಕೊಂಡಿದ್ದು, ಅವರ ಸೇವೆಯನ್ನು ಪರಿಗಣಿಸಿ ಪ್ರತಿ ವರ್ಷ ಸೇವಾ ಅವಧಿಯನ್ನು ಒಂದು ದಿನ ಮೊಟಕುಗೊಳಿಸಿ ಪುನಃ ಮುಂದುವರಿಸಲಾಗುತ್ತದೆ. ಈ ಹುದ್ದೆಗಳು ಸಂಪೂರ್ಣವಾಗಿ ತಾತ್ಕಾಲಿಕ ಹುದ್ದೆಗಳಾಗಿರುವುದರಿಂದ ಈ ಹುದ್ದೆಗಳ ಎದುರು ಕಾರ್ಯನಿರ್ವಹಿಸುತ್ತಿರುವ ತಜ್ಞ ವೈದ್ಯರ ಸೇವೆಯನ್ನು ಖಾಯಂ ಮಾಡುವ ಯಾವುದೇ ಪ್ರಸ್ತಾಪ ಸರ್ಕಾರದ ಮುಂದೆ ಇರುವುದಿಲ್ಲ. |
| ಈ | ಗುತ್ತಿಗೆ ತಜ್ಞ ವೈದ್ಯರನ್ನು ಯಾವಾಗ ಖಾಯಂಗೊಳಿಸಲಾಗುವುದು; ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? (ಸಂಪೂರ್ಣ ಮಾಹಿತಿ ನೀಡುವುದು) | |

ಸಂಖ್ಯೆ: ಆಕುಕ 667 ಚುರಪ್ರ 2021

(ಡಾ. ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

ಅನುಬಂಧ – 1

## Specialist Doctors Positions in Upgraded Hospitals under National AYUSH Mission in the state of Karnataka

| sl no | Name of the District | Specialist Doctors | | |
|---|---|---|---|---|
| | | Sanctioned | Working | Vacant |
| 1 | Bagalkote | 6 | 3 | 3 |
| 2 | Ballari | 8 | 7 | 1 |
| 3 | Belagavi | 10 | 9 | 1 |
| 4 | Bengaluru Rural | 2 | 2 | 0 |
| 5 | Bengaluru Urban | 0 | 0 | 0 |
| 6 | Bidar | 4 | 4 | 0 |
| 7 | Chamarajanagar | 4 | 4 | 0 |
| 8 | Chikkaballapur | 2 | 2 | 0 |
| 9 | Chikkamagalur | 6 | 6 | 0 |
| 10 | Chitradurga | 6 | 5 | 1 |
| 11 | Dakshina Kannada | 4 | 4 | 0 |
| 12 | Davanagere | 4 | 3 | 1 |
| 13 | Dharwad | 2 | 0 | 2 |
| 14 | Gadag | 6 | 6 | 0 |
| 15 | Hassan | 12 | 11 | 1 |
| 16 | Haveri | 4 | 4 | 0 |
| 17 | Kalburgi | 8 | 0 | 8 |
| 18 | Kodagu | 6 | 6 | 0 |
| 19 | Kolar | 4 | 1 | 3 |
| 20 | Koppal | 8 | 7 | 1 |
| 21 | Mandya | 10 | 10 | 0 |
| 22 | Mysore | 4 | 4 | 0 |
| 23 | Raichur | 8 | 8 | 0 |
| 24 | Ramanagara | 4 | 2 | 2 |
| 25 | Shivamogga | 0 | 0 | 0 |
| 26 | Tumakur | 6 | 5 | 1 |
| 27 | Udupi | 4 | 3 | 1 |
| 28 | Uttara Kannada | 8 | 8 | 0 |
| 29 | Vijapur | 2 | 2 | 0 |
| 30 | Yadgir | 8 | 5 | 3 |
| | **Grand Total** | **160** | **131** | **29** |

ಆಯುಕ್ತರು
ಆಯುರ್ವೇದ, ಯೋಗ ಮತ್ತು ನ್ಯಾಚುರೋಪತಿ
ಯುನಾನಿ, ಸಿದ್ಧ ಮತ್ತು ಹೋಮಿಯೋಪತಿ

Annexure-1

**List of Pancha karma Specialist Medical Officer working under National Health Mission Ayush programme**

| SL No | District | Name of the Panchakarma Specialist |
|---|---|---|
| 1 | Bangalore Urban | Dr.Basavajyothi |
| | | Dr.Savitha .H |
| 2 | Belagavi | Dr.Girish Deshpande |
| | | Dr.Vidyavatishirur |
| 3 | Chickkamagaluru | Dr.Bhanumathi R |
| | | Dr.Eshwari C M |
| 4 | Chitradurga | Dr.Devendrappa F Budi |
| | | Dr. Anupama Naik |
| 5 | Davanagere | Dr. Sathish Kumar N |
| 6 | Dharwad | Dr.IshwarappaUgar |
| | | Dr.NusarathHazi |
| 7 | Kalburagi | Dr. Priyanka |
| | | Dr.Srinath Rathod |
| 8 | Hassan | Dr Thejeswini |
| 9 | Haveri | Dr.K.B.Payappagoudar |
| | | Dr.V.V.Dasar |
| 10 | Kolar | Dr. Milind S Yadahalli |
| 11 | Raichur | Dr.Navin ND |
| | | Dr.Vikramaditya Jangir |
| 12 | Shivamogga | Dr.Mallappa M Chinchakhandi |
| | | Dr.Latha A |
| 13 | Udupi | Dr.Rashmikamat |

# ಕರ್ನಾಟಕ ವಿಧಾನಸಭೆ

| | |
|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ.ಸಂಖ್ಯೆ** | **668** |
| **ಸದಸ್ಯರ ಹೆಸರು** | **ಡಾ॥ ಅಜಯ್ ಧರ್ಮ ಸಿಂಗ್(ಜೇವರ್ಗಿ)** |
| **ವಿಷಯ** | **ಸಾಂಕ್ರಾಮಿಕ ರೋಗದಿಂದ ಮೃತಪಟ್ಟಿರುವ ಕುಟುಂಬಗಳಿಗೆ ಪರಿಹಾರ ನೀಡುವ ಕುರಿತು** |
| **ಉತ್ತರಿಸುವ ದಿನಾಂಕ** | **16/12/2021** |
| **ಉತ್ತರಿಸುವವರು** | **ಕಂದಾಯ ಸಚಿವರು** |
| **ಪ್ರಶ್ನೆ** | **ಉತ್ತರ** |
| ಅ)ಕೋವಿಡ್-19 ರೋಗದಿಂದ ಕುಟುಂಬದ ಸದಸ್ಯರನ್ನು ಕಳೆದುಕೊಂಡು ಕಣ್ಣೀರಿಡುತ್ತಾ ಸಂಕಷ್ಟದಲ್ಲಿರುವ ಕುಟುಂಬಗಳಿಗೆ ಸರ್ಕಾರವು ನೀಡಲಿರುವ ಪರಿಹಾರಕ್ಕೆ ದಾಖಲಾಗಿರುವ ಅರ್ಜಿಗಳ ಸಂಖ್ಯೆ ಎಷ್ಟು; ಆ ಪೈಕಿ ತಿರಸ್ಕೃತಗೊಂಡ ಅರ್ಜಿಗಳ ಸಂಖ್ಯೆ ಎಷ್ಟು; (ಸಂಪೂರ್ಣ ವಿವರ ನೀಡುವುದು) | ರಾಜ್ಯದಲ್ಲಿ ದಿನಾಂಕ:10.12.2021ರವರೆಗೆ ಒಟ್ಟು 38,174 ಕೋವಿಡ್-19 ಮೃತ ಪ್ರಕರಣಗಳು ದಾಖಲಾಗಿದ್ದು, ಈ ಪೈಕಿ ಒಟ್ಟು 17098 ಅರ್ಜಿಗಳು ಸ್ವೀಕೃತವಾಗಿರುತ್ತದೆ. ಜಿಲ್ಲಾವಾರು ಮಾಹಿತಿ **ಅನುಬಂಧ-1**ರಲ್ಲಿ ಲಗತ್ತಿಸಿದೆ. |
| ಆ)ಬಂದಿರುವ ಅರ್ಜಿಗಳಲ್ಲಿ ಎಷ್ಟು ಕುಟುಂಬಗಳಿಗೆ ಸರ್ಕಾರವು ಪರಿಹಾರ ನೀಡಿದೆ;(ಸಂಪೂರ್ಣ ಮಾಹಿತಿ ನೀಡುವುದು) | ಸ್ವೀಕೃತವಾದ ಅರ್ಜಿಗಳಲ್ಲಿ, ಪರಿಶೀಲಿಸಿ ಜಿಲ್ಲಾಧಿಕಾರಿಗಳು ಅನುಮೋದಿಸಲಾದ 11438 ಫಲಾನುಭವಿಗಳಿಗೆ ರೂ.50,000/- ಪರಿಹಾರ ಧನವನ್ನು ನೇರ ಹಣ ಸಂದಾಯದ ಮೂಲಕ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗಿದೆ. ಉಳಿಕೆ 2229 ಅರ್ಜಿಗಳು ಪರಿಶೀಲನಾ ಹಂತದಲ್ಲಿರುತ್ತದೆ.<br><br>ರಾಜ್ಯ ಸರ್ಕಾರವು ಬಿ.ಪಿಎಲ್ ಕುಟುಂಬದವರಿಗೆ ಘೋಷಿಸಿರುವ ರೂ.1.00 ಲಕ್ಷ ಪರಿಹಾರಕ್ಕಾಗಿ ಒಟ್ಟು 10289 ಅರ್ಜಿಗಳು ಸ್ವೀಕೃತವಾಗಿದ್ದು, ಪರಿಶೀಲನಾ ಕಾರ್ಯ ಮುಗಿದ 8424 ಫಲಾನುಭವಿಗಳಲ್ಲಿ ಬಿಡುಗಡೆಯಾಗಿರುವ ಒಟ್ಟು ರೂ.120.00 ಕೋಟಿ ಅನುದಾನದಲ್ಲಿ ಒಟ್ಟು 8424 ಫಲಾನುಭವಿಗಳಿಗೆ ರೂ.1.00 ಲಕ್ಷ ಪರಿಹಾರವನ್ನು ಚೆಕ್ ಮೂಲಕ ವಿತರಿಸಲು ಜಿಲ್ಲಾಧಿಕಾರಿಗಳ ಹಂತದಲ್ಲಿ ಕ್ರಮವಹಿಸಲಾಗುತ್ತಿದೆ. ಪ್ರಸ್ತುತ ವಿಧಾನ ಪರಿಷತ್ತಿನ ಸ್ಥಳೀಯ ಸಂಸ್ಥೆಗಳ ಚುನಾವಣೆ ಪ್ರಕ್ರಿಯೆ ಜಾರಿಯಲ್ಲಿರುವ ಹಿನ್ನೆಲೆಯಲ್ಲಿ ಚೆಕ್ ವಿತರಣೆಗೆ ಸಾಧ್ಯವಾಗಿರುವುದಿಲ್ಲ. |

| | |
|---|---|
| ಇ)ಪ್ರತೀ ಕುಟುಂಬಕ್ಕೆ ನೀಡುವ ಪರಿಹಾರ ಮೊತ್ತವೆಷ್ಟು; (ಸಂಪೂರ್ಣ ವಿವರ ನೀಡುವುದು) | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕೋವಿಡ್ ನಿಂದ ಮೃತಪಟ್ಟ ಎಲ್ಲಾ ಪ್ರಕರಣಗಳಲ್ಲಿ ರೂ.50,000/-ಗಳ ಪರಿಹಾರಧನವನ್ನು ರಾಜ್ಯ ವಿಪತ್ತು ಪರಿಹಾರ ನಿಧಿ (SDRF)ಯಿಂದ ನೇರ ಹಣ ಸಂದಾಯದ ಮೂಲಕ ಫಲಾನುಭವಿಗಳಿಗೆ ಪಾವತಿಸಲಾಗುತ್ತಿದೆ.<br><br>ರಾಜ್ಯ ಸರ್ಕಾರದ ಘೋಷಣೆಯಂತೆ ಪ್ರತಿ ಬಿ.ಪಿ.ಎಲ್ ಕುಟುಂಬಕ್ಕೆ ಒಂದು ಬಾರಿ ರೂ.1.00 ಲಕ್ಷ ಪರಿಹಾರವನ್ನು ನೀಡಲಾಗುತ್ತಿದೆ. |
| ಈ) ಸರ್ಕಾರವು ಷರತ್ತು ರಹಿತವಾಗಿ ಪ್ರಕೃತಿ ವಿಕೋಪ ನಿಯಮಗಳಡಿ ನೀಡುವ ಪರಿಹಾರದಂತೆ ಕೋವಿಡ್ ನಿಂದ ಮೃತಪಟ್ಟ ಎಲ್ಲಾ ವಾರಸುದಾರರಿಗೂ ಪರಿಹಾರ ನೀಡುವ ಉದ್ದೇಶ ಹೊಂದಿದೆಯೇ: | ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ಕೋವಿಡ್ ನಿಂದ ಮೃತಪಟ್ಟ ಎಲ್ಲಾ ಪ್ರಕರಣಗಳಲ್ಲಿ ರೂ.50,000/-ಗಳ ಪರಿಹಾರ ಧನವನ್ನು ರಾಜ್ಯ ವಿಪತ್ತು ಪರಿಹಾರ ನಿಧಿ (SDRF)ಯಿಂದ ನೇರ ಹಣ ಸಂದಾಯದ ಮೂಲಕ ಫಲಾನುಭವಿಗಳಿಗೆ ಪಾವತಿಸಲಾಗುತ್ತಿದೆ.<br><br>ಷರತ್ತು ರಹಿತವಾಗಿ ರಾಜ್ಯ ಸರ್ಕಾರದ ಘೋಷಣೆಯಂತೆ ಪ್ರತಿ ಬಿ.ಪಿ.ಎಲ್ ಕುಟುಂಬಕ್ಕೆ ಒಂದು ಬಾರಿ ರೂ.1.00 ಲಕ್ಷ ಆರ್ಥಿಕ ನೆರವನ್ನು ನೀಡುವಲ್ಲಿ ತಿದ್ದುಪಡಿ ಆದೇಶ ಹೊರಡಿಸಿದೆ. |
| ಉ)ಜೇವರ್ಗಿ ಮತ್ತು ಯಡ್ರಾಮಿ ಮತಕ್ಷೇತ್ರದಲ್ಲಿ ಕೋವಿಡ್-19 ನಿಂದ ಮೃತಪಟ್ಟಿರುವ ಹಾಗೂ ಚಿಕಿತ್ಸೆ ಪಡೆದಿರುವ ಒಟ್ಟು ರೋಗಿಗಳೆಷ್ಟು ಹಾಗೂ ಮರಣ ಹೊಂದಿದವರ ಸಂಖ್ಯೆ ಎಷ್ಟು ಹಾಗೂ ನೀಡಿರುವ ಪರಿಹಾರದ ಮೊತ್ತವೆಷ್ಟು? (ಗ್ರಾಮಾವಾರು ಮಾಹಿತಿ ನೀಡುವುದು) | ಜೇವರ್ಗಿ ಮತ್ತು ಯಡ್ರಾಮಿ ಮತಕ್ಷೇತ್ರದಲ್ಲಿ ಒಟ್ಟು 4177 ರೋಗಿಗಳು ಕೋವಿಡ್-19 ಚಿಕಿತ್ಸೆ ಪಡೆದಿದ್ದು, ಈ ಪೈಕಿ 36 ಮೃತ ಪ್ರಕರಣಗಳಾಗಿರುತ್ತವೆ. ಕ್ರಮವಾಗಿ ಗ್ರಾಮಾವಾರು ಮಾಹಿತಿಯನ್ನು **ಅನುಬಂಧ-2 (ಸಿಡಿ)** ಮತ್ತು **ಅನುಬಂಧ-3** ರಲ್ಲಿ ಲಗತ್ತಿಸಿದೆ.<br><br>ಕೇಂದ್ರ ಸರ್ಕಾರದ ಮಾರ್ಗಸೂಚಿಯನ್ವಯ ರೂ.50,000/- ಪರಿಹಾರ ವಿತರಣೆಗೆ ಇದುವರೆವಿಗೆ ಪರಿಶೀಲಿಸಿ ಜಿಲ್ಲಾಧಿಕಾರಿಗಳು ಅನುಮೋದಿಸಲಾದ 22 ಫಲಾನುಭವಿಗಳಿಗೆ ಪರಿಹಾರ ಧನವನ್ನು ನೇರ ಹಣ ಸಂದಾಯದ ಮೂಲಕ ಬ್ಯಾಂಕ್ ಖಾತೆಗೆ ವರ್ಗಾಯಿಸಲಾಗಿದೆ. ರೂ.1.00 ಲಕ್ಷ ಪರಿಹಾರವನ್ನು ಚೆಕ್ ಮೂಲಕ ವಿತರಿಸಲು ಕಲ್ಬುರ್ಗಿ ಜಿಲ್ಲಾಧಿಕಾರಿಗಳಿಗೆ ರೂ.205.00 ಲಕ್ಷ ಅನುದಾನವನ್ನು ಬಿಡುಗಡೆಗೊಳಿಸಲಾಗಿದ್ದು, ಜಿಲ್ಲಾಧಿಕಾರಿಗಳ ಹಂತದಲ್ಲಿ ಕ್ರಮವಹಿಸಲಾಗುತ್ತಿದೆ. ಪ್ರಸ್ತುತ ವಿಧಾನ ಪರಿಷತ್ತಿನ ಸ್ಥಳೀಯ ಸಂಸ್ಥೆಗಳ ಚುನಾವಣೆ ಪ್ರಕ್ರಿಯೆ ಜಾರಿಯಲ್ಲಿರುವ ಹಿನ್ನೆಲೆಯಲ್ಲಿ ಚೆಕ್ ವಿತರಣೆಗೆ ಸಾಧ್ಯವಾಗಿರುವುದಿಲ್ಲ. |

**DSSP- LAQ-61/2021**

**(ಆರ್.ಅಶೋಕ)**

**ಕಂದಾಯ ಸಚಿವರು**

## ಮಾನ್ಯ ವಿಧಾನಸಭೆಯ ಸದಸ್ಯರಾದ ಡಾ|| ಅಜಯ್ ಧರ್ಮ ಸಿಂಗ್(ಜೇವರ್ಗಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:668ಕ್ಕೆ ಅನುಬಂಧ -1

| ಕ್ರಮ ಸಂಖ್ಯೆ | ಜಿಲ್ಲೆ | ಒಟ್ಟು ಸ್ವೀಕೃತವಾದ ಅರ್ಜಿಗಳ ಸಂಖ್ಯೆ | ಬಿಪಿಎಲ್ ಕುಟುಂಬದ ಪ್ರಕರಣಗಳು | ಎಪಿಎಲ್ ಕುಟುಂಬದ ಪ್ರಕರಣಗಳು | ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಬಿಪಿಎಲ್ ಕುಟುಂಬದ ಪ್ರಕರಣಗಳು | ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಎಪಿಎಲ್ ಕುಟುಂಬದ ಪ್ರಕರಣಗಳು | ಜಿಲ್ಲಾಧಿಕಾರಿಗಳಿಂದ ಅನುಮೋದನೆಗೊಂಡ ಒಟ್ಟು ಅರ್ಜಿಗಳು | ಕೇಂದ್ರ ಸರ್ಕಾರದ ಪರಿಹಾರ ರೂ.50,000/- ಪಾವತಿಸಲಾದ ಪ್ರಕರಣಗಳು |
|---|---|---|---|---|---|---|---|---|
| 1 | Bagalkot | 266 | 139 | 127 | 138 | 126 | 264 | 226 |
| 2 | Ballari | 408 | 280 | 128 | 178 | 50 | 228 | 190 |
| 3 | Vijayanagara | 395 | 294 | 101 | 188 | 45 | 233 | 201 |
| 4 | Bangalore Rural | 580 | 426 | 154 | 377 | 129 | 506 | 426 |
| 5 | Belagavi | 533 | 350 | 183 | 290 | 142 | 432 | 376 |
| 6 | Bengaluru Urban | 548 | 455 | 93 | 399 | 84 | 483 | 387 |
| 7 | Bengaluru BBMP | 3275 | 1375 | 1900 | 969 | 1337 | 2306 | 1751 |
| 8 | Bidar | 344 | 183 | 161 | 174 | 141 | 315 | 279 |
| 9 | Chamarajanagar | 216 | 192 | 24 | 101 | 7 | 108 | 102 |
| 10 | Chikballapur | 306 | 239 | 67 | 225 | 56 | 281 | 242 |
| 11 | Chikkamagaluru | 255 | 170 | 85 | 89 | 21 | 110 | 94 |
| 12 | Chitradurga | 167 | 106 | 61 | 87 | 44 | 131 | 115 |
| 13 | Dakshina Kannada | 859 | 421 | 438 | 332 | 363 | 695 | 568 |
| 14 | Davanagere | 383 | 249 | 134 | 157 | 89 | 246 | 214 |
| 15 | Dharwad | 800 | 401 | 399 | 360 | 281 | 641 | 528 |
| 16 | Gadag | 237 | 133 | 104 | 132 | 102 | 234 | 195 |
| 17 | Hassan | 788 | 564 | 224 | 433 | 154 | 587 | 521 |
| 18 | Haveri | 567 | 393 | 174 | 385 | 164 | 549 | 482 |
| 19 | Kalaburagi | 503 | 258 | 245 | 242 | 214 | 456 | 383 |
| 20 | Kodagu | 281 | 143 | 138 | 131 | 125 | 256 | 230 |
| 21 | Kolar | 370 | 295 | 75 | 257 | 55 | 312 | 268 |
| 22 | Koppal | 378 | 245 | 133 | 237 | 131 | 368 | 325 |
| 23 | Mandya | 427 | 360 | 67 | 313 | 48 | 361 | 315 |
| 24 | Mysuru | 559 | 452 | 107 | 342 | 42 | 384 | 342 |
| 25 | Raichur | 204 | 129 | 75 | 82 | 45 | 127 | 112 |
| 26 | Ramanagara | 256 | 210 | 46 | 138 | 21 | 159 | 142 |
| 27 | Shivamogga | 785 | 381 | 404 | 374 | 395 | 769 | 634 |
| 28 | Tumakuru | 834 | 582 | 252 | 506 | 205 | 711 | 605 |
| 29 | Udupi | 403 | 195 | 208 | 141 | 154 | 295 | 251 |
| 30 | Uttara Kannada | 676 | 396 | 280 | 390 | 272 | 662 | 559 |
| 31 | Vijayapura | 359 | 166 | 193 | 152 | 176 | 328 | 262 |
| 32 | Yadgir | 136 | 107 | 29 | 105 | 25 | 130 | 113 |
| **GRAND TOTAL** | | **17098** | **10289** | **6809** | **8424** | **5243** | **13667** | **11438** |

ಮಾನ್ಯ ವಿಧಾನಸಭೆಯ ಸದಸ್ಯರಾದ ಡಾ|| ಅಜಯ್ ಧರ್ಮ ಸಿಂಗ್(ಜೇವರ್ಗಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:668ಕ್ಕೆ ಅನುಬಂಧ -3

| SL NO | State P-Code | Name of the Dist | Name oF the Taluk | Name of Patient | Address |
|---|---|---|---|---|---|
| 1 | P-141762 | KALABURAGI | JEWARGI | INDUBAI | JEWARGI |
| 2 | P-171177 | KALABURAGI | JEWARGI URBAN | ANK AVADUT RAO KULKARNI | JEWARGI |
| 3 | P-171151 | KALABURAGI | JEWARGI RURAL | JUBEDA BEGAM CHAND BADEMUJVAL | WADIGERA YEDRAMI |
| 4 | P-200746 | KALABURAGI | JEWARGI RURAL | SOUNDARYA ERAYYA | HIPPARGA SN JEWARGI |
| 5 | P-217553 | KALABURAGI | JEWARGI | CHIDANAND MARIAPPA KATTI | ITAGA, JEWARGI TALUK |
| 6 | P-321583 | KALABURAGI | JEWARGI | ABUSHABAI | YADRAMI TQ JEWARGI 585325 |
| 7 | P-380388 | KALABURAGI | JEWARGI | BINDUBAI NARASAPPA BADIGER | NEAR DEVI TEMPLE, HIPPARAGA S N TQ JEVARGI |
| 8 | P-413863 | KALABURAGI | JEWARGI | BASAVARAJ SHRIMANTH | YANKANCHI NEAR ROAD, JEWARGI |
| 9 | P-311285 | KALABURAGI | JEWARGI | RANAPPA S | NELOGI, JEWARGI TALUK, KALABURAGI |
| 10 | P-557827 | KALABURAGI | JEWARGI | MUTTANNA BASAPPA | KALLUR K, JEWARGI, KALBURGI |
| 11 | P-713440 | KALABURAGI | JEWARGI | SHIVAPPA | YATNAL, JEWARGI |
| 12 | P-765563 | KALABURAGI | JEWARGI | AMBARAYA MALKAGAPPA | KOLKUR, JEWARGI, KALABURAGI |
| 13 | P-746762 | KALABURAGI | JEWARGI | MARIYAMMA BHIMRAYA | SHASTRI CHOWK, JEWARGI |
| 14 | P-867867 | KALABURAGI | JEWARGI | SHIVASHARANAPPA BASAVANTARAYA PATIL | MAHOOR, JEWARGI TALUKA, KALABURAGI |
| 15 | P-1163750 | KALABURAGI | JEWARGI | BHEEMBAI W/O GANGAPPA | ITAGA, TQ JEWARGI , DIST-KALABURGI |
| 16 | P-1236118 | KALABURAGI | JEWARGI | SANTHMALLAPPA S/O IRANNA PANEGOAN | ITGA, TQ-JEWARGI DIST - KALABURAGI |
| 17 | P- 1317673 | KALABURAGI | JEWARGI | SHAMLABAI W/O KRISHNARAO | MAVANOOR TQ JEWARAGI |
| 18 | P-1708218 | KALABURAGI | JEWARGI | GUNDAPPA | ITAGA, JEWARGI |
| 19 | P-1705998 | KALABURAGI | JEWARGI | MAREMMA MARALINGA | GANWAR, JEWARGI |
| 20 | P-1357520 | KALABURAGI | JEWARGI | SHARSNAPPA | KELLUR, JEWARGI |
| 21 | P-1915036 | KALABURAGI | JEWARGI | LAXMIBAI SHIVAPUTRA | KACHUR, JEWARGI |
| 22 | P-1973822 | KALABURAGI | JEWARGI | APPASAIBGOUDA PATIL | KOTNOOR, JEWARGI |
| 23 | P-1566920 | KALABURAGI | JEWARGI | NEELAMMA | KELLUR, JEWARGI |
| 24 | P-1973766 | KALABURAGI | JEWARGI | PARVATI SHANKAR GOUDA | KONDAGALLI, YADRAMI, JEWARGI |
| 25 | P-2186469 | KALABURAGI | JEWARGI | SIDDANNA | KATTI SANGAVI, JEWARGI |
| 26 | P-2080834 | KALABURAGI | JEWARGI | KAMALABAI | ANKALAGI, JEWARGI |
| 27 | P-2301415 | KALABURAGI | JEWARGI | MERABAI | LAXMI CHOWK, JEWARGI |
| 28 | P-2370356 | KALABURAGI | JEWARGI | MIRAJ BEGUM | KUDALGI, JEWARGI |
| 29 | P-2286750 | KALABURAGI | JEWARGI | GAURAMMA | VASTARI, JEWARGI |
| 30 | P-2131320 | KALABURAGI | JEWARGI | SUNDRIBAI | NELOGI, TQ JEWARGI |
| 31 | P-2331192 | KALABURAGI | JEWARGI | CHANDRAKANTH BHAGVATAYA KANNUR | TELAGBOL, JEWARGI |
| 32 | P-2457554 | KALABURAGI | JEWARGI | TIPPARI GOWLI | JEWARGI , KALABURAGI |
| 33 | P-2377715 | KALABURAGI | JEWARGI | BORAMMA | BALGUNDAGI, JEWARGI |
| 34 | P-1229996 | KALABURAGI | JEWARGI | GANGAPPA POOJARI | ITAGA, JEWARGI |
| 35 | P-2443306 | KALABURAGI | JEWARGI | BHEEMARAYA | BIRAL-B, JEWARGI |
| 36 | P-2370343 | KALABURAGI | JEWARGI | KASTURBAI CHANDU | KADKOL, YADRAMI, JEWARGI |

## ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **669**
ಮಾನ್ಯ ಸದಸ್ಯರ ಹೆಸರು : ಡಾ|| ಅಜಯ್ ಧರ್ಮಸಿಂಗ್ (ಜೇವರ್ಗಿ)
ಉತ್ತರಿಸಬೇಕಾದ ದಿನಾಂಕ : **16-12-2021**
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಸಚಿವರು

* * *

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದಲ್ಲಿ ನಿರಂತರವಾಗಿ ಸುರಿಯುತ್ತಿರುವ ಮಳೆ ಹಾಗೂ ಶೀತಗಾಳಿಯಿಂದ ಜನಸಾಮಾನ್ಯರಿಗೆ ಕಾಡುವ ಮಲೇರಿಯಾ, ಡೆಂಗ್ಯೂ, ಚಿಕನ್ ಗುನ್ಯದಂತಹ ಆರೋಗ್ಯ ಸಮಸ್ಯೆಗಳು ಹೆಚ್ಚಾಗಿ ಕಂಡು ಬರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ: | ಬಂದಿದೆ. |
| ಆ | ಬಂದಿದ್ದಲ್ಲಿ, ಎಷ್ಟು ಪ್ರಕರಣಗಳು ಪತ್ತೆಯಾಗಿವೆ: (ಜಿಲ್ಲಾವಾರು ಮಾಹಿತಿ ನೀಡುವುದು) | ಮಲೇರಿಯ, ಡೆಂಗ್ಯೂ ಮತ್ತು ಚಿಕನ್‌ಗುನ್ಯ ಪ್ರಕರಣಗಳ ಜಿಲ್ಲಾವಾರು ಮಾಹಿತಿ ಈ ಕೆಳಕಂಡತಿದೆ. |

| ಕ್ರಸಂ | ಜಿಲ್ಲೆಗಳ ಹೆಸರು | ಅಕ್ಟೋಬರ್ 2021ರ ಅಂತ್ಯಕ್ಕೆ | 01.01.2021 ರಿಂದ 02.12.2021ರ ಅಂತ್ಯಕ್ಕೆ | |
|---|---|---|---|---|
| | | ಮಲೇರಿಯ | ಡೆಂಗ್ಯೂ | ಚಿಕನ್ ಗುನ್ಯ |
| | ಬಿ.ಬಿ.ಎಂ.ಪಿ | 0 | 1297 | 53 |
| 1 | ಬೆಂಗಳೂರು(ನ) | 0 | 44 | 55 |
| 2 | ಬೆಂಗಳೂರು(ಗ್ರಾ) | 1 | 34 | 48 |
| 3 | ರಾಮನಗರ | 1 | 32 | 24 |
| 4 | ಕೋಲಾರ | 4 | 143 | 157 |
| 5 | ಚಿಕ್ಕಬಳ್ಳಾಪುರ | 8 | 98 | 44 |
| 6 | ತುಮಕೂರು | 3 | 153 | 135 |
| 7 | ಚಿತ್ರದುರ್ಗ | 1 | 188 | 90 |
| 8 | ದಾವಣಗೆರೆ | 3 | 262 | 83 |
| 9 | ಶಿವಮೊಗ್ಗ | 2 | 441 | 239 |
| 10 | ಬೆಳಗಾವಿ | 10 | 71 | 3 |
| 11 | ಬಿಜಾಪುರ | 4 | 288 | 162 |
| 12 | ಬಾಗಲಕೋಟೆ | 3 | 81 | 37 |
| 13 | ಧಾರವಾಡ | 4 | 112 | 44 |
| 14 | ಗದಗ | 3 | 209 | 49 |
| 15 | ಹಾವೇರಿ | 2 | 217 | 55 |
| 16 | ಉತ್ತರಕನ್ನಡ | 8 | 62 | 0 |
| 17 | ಗುಲ್ಬರ್ಗಾ | 8 | 386 | 204 |
| 18 | ಯಾದಗಿರಿ | 47 | 152 | 123 |

| | | | | |
|---|---|---|---|---|
| 19 | ಬೀದರ್ | 1 | 136 | 17 |
| 20 | ಬಳ್ಳಾರಿ | 3 | 342 | 21 |
| 21 | ರಾಯಚೂರು | 12 | 102 | 0 |
| 22 | ಕೊಪ್ಪಳ | 0 | 304 | 5 |
| 23 | ಮೈಸೂರು | 0 | 82 | 20 |
| 24 | ಚಾಮರಾಜನಗರ | 1 | 55 | 3 |
| 25 | ಮಂಡ್ಯ | 4 | 211 | 154 |
| 26 | ಹಾಸನ | 12 | 33 | 7 |
| 27 | ದಕ್ಷಿಣಕನ್ನಡ | 645 | 262 | 1 |
| 28 | ಉಡುಪಿ | 26 | 356 | 10 |
| 29 | ಚಿಕ್ಕಮಗಳೂರು | 4 | 72 | 14 |
| 30 | ಕೊಡಗು | 4 | 51 | 10 |
| ಒಟ್ಟು ಪ್ರಕರಣಗಳು | | 824 | 4979 | 1814 |

| | | |
|---|---|---|
| ಇ | ಈ ರೋಗಗಳನ್ನು ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ವಿವರ ನೀಡುವುದು) | ಮಲೇರಿಯ, ಡೆಂಗ್ಯೂ ಮತ್ತು ಚಿಕನ್‌ಗುನ್ಯ ರೋಗಗಳನ್ನು ತಡೆಗಟ್ಟಲು ಸರ್ಕಾರ ತೆಗೆದುಕೊಂಡಿರುವ ಕ್ರಮಗಳನ್ನು **ಅನುಬಂಧದ**ಲ್ಲಿರಿಸಿದೆ. |
| ಈ | ಮಕ್ಕಳಿಗೆ ಕೊರೊನಾ ಲಸಿಕೆಯನ್ನು ನೀಡದಿರುವುದರಿಂದ ಶೀತ ಸಂಬಂಧಿ ಕಾಯಿಲೆಗಳನ್ನು ತಡೆಗಟ್ಟಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ? | 0–18 ವರ್ಷದವರೆಗೆ ಕರೋನಾ ಲಸಿಕೆ ಸಧ್ಯಕ್ಕೆ ನೀಡುತ್ತಿಲ್ಲವಾದ್ದರಿಂದ, ಶೀತ ಸಂಬಂಧಿ ಕಾಯಿಲೆಯಿಂದ ಬಳಲುವ ಮಕ್ಕಳು ಆಸ್ಪತ್ರೆಗೆ ಬಂದಲ್ಲಿ, ಹೊರ ರೋಗಿಗಳ ವಿಭಾಗದಲ್ಲಿಯೇ ಕರೋನಾ ರೋಗ ಲಕ್ಷಣಗಳು ಇದ್ದಲ್ಲಿ ಮೊದಲನೇಯದಾಗಿ, RAT ಪರೀಕ್ಷೆಗೆ ಒಳಪಡಿಸುತ್ತೇವೆ. ಅದರಲ್ಲಿ ನೆಗೆಟಿವ್ ಬಂದರೂ ಸಹ RTPCR ಟೆಸ್ಟ್‌ಗೆ ಒಳಪಡಿಸಲಾಗುತ್ತದೆ. ಟೆಸ್ಟ್ ವರದಿ ಬರುವವರೆಗೂ ಸಂಬಂಧಪಟ್ಟ ಮಗುವನ್ನು ಪ್ರತ್ಯೇಕವಾಗಿ (Isolate) ಇರಿಸಲಾಗುತ್ತದೆ. ನಂತರ ವರದಿಯಲ್ಲಿ ಕರೋನಾ ದೃಢಪಟ್ಟಲ್ಲಿ ಸೂಕ್ತ ಚಿಕಿತ್ಸೆ ನೀಡಲಾಗುವುದು ಹಾಗೂ ಒಂದು ವೇಳೆ ತೀವ್ರ ನ್ಯೂಮೋನಿಯಾ ರೋಗ ಲಕ್ಷಣಗಳು ಕಂಡುಬಂದಲ್ಲಿ ಐ.ಸಿ.ಯು. ನಲ್ಲಿ ಚಿಕಿತ್ಸೆ ನೀಡಲಾಗುವುದು. |

**ಸಂಖ್ಯೆ: ಆಕುಕ 669 ಚುರಪ್ರ 2021**

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಅನುಬಂಧ-4

ರಾಜ್ಯದಲ್ಲಿ ಮಲೇರಿಯ, ಡೆಂಗಿ ಮತ್ತು ಚಿಕುಂಗುನ್ಯಾ ನಿಯಂತ್ರಣಕ್ಕಾಗಿ ಭಾರತ ಸರ್ಕಾರದ ರಾಷ್ಟ್ರೀಯ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣ ಕಾರ್ಯಕ್ರಮದ (National Vector Borne Disease Control Programme Guidelines) ಮಾರ್ಗಸೂಚಿಯಂತೆ ಈ ಕೆಳಕಂಡಂತೆ ಎಲ್ಲಾ ನಿಯಂತ್ರಣ ಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ.

**ಮಲೇರಿಯಾ ರೋಗ ನಿಯಂತ್ರಣಕ್ಕಾಗಿ ಸರ್ಕಾರ ಹಮ್ಮಿಕೊಂಡಿರುವ ಕಾರ್ಯಕ್ರಮಗಳ ವಿವರ ಹೀಗಿದೆ.**

1. ಮಲೇರಿಯಾ ರೋಗವನ್ನು ಕರ್ನಾಟಕ ಸಾರ್ವಜನಿಕ ಆರೋಗ್ಯ ನಿಯಮಗಳ ಅಡಿಯಲ್ಲಿ ಅಧಿಸೂಚಿತ ರೋಗವೆಂದು ಪ್ರಕಟಿಸಲಾಗಿದೆ.
2. ಈ ರೋಗದ ಶೀಘ್ರ ಪತ್ತೆಗಾಗಿ ನಿಗದಿತ ಗುರಿಯಂತೆ ಆರೋಗ್ಯ ಕಾರ್ಯಕರ್ತರು ಹಾಗೂ ಆಶಾ ಕಾರ್ಯಕರ್ತೆಯರು ಮನೆಮನೆಗೆ ಭೇಟಿ ನೀಡುವ ಮೂಲಕ ಜ್ವರ ಸಮೀಕ್ಷಾ ಹಾಗೂ ರಕ್ತಲೇಪನ ತೆಗೆಯುವ ಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದಾರೆ.
3. ಅಗತ್ಯ ಪ್ರಮಾಣದ ಮಲೇರಿಯಾ ನಿರೋಧಕ ಔಷಧಿಗಳು, ಜೀವರಕ್ಷಕ ಔಷಧಿಗಳು, ಕೀಟನಾಶಕ ದ್ರಾವಣಗಳನ್ನು ಸಾಕಷ್ಟು ಪ್ರಮಾಣದಲ್ಲಿ ದಾಸ್ತಾನು ಲಭ್ಯವಿದ್ದು, ತುರ್ತು ಸಂದರ್ಭ ಒದಗಿಬಂದಲ್ಲಿ ತಕ್ಷಣ ಸ್ಪಂದಿಸಲು ಪ್ರತಿ ಜಿಲ್ಲೆಯಲ್ಲಿ ಕ್ಷಿಪ್ರ ಪ್ರತಿಕ್ರಿಯಾ ತಂಡಗಳನ್ನು ರಚಿಸಲಾಗಿದೆ.
4. " ಶೂನ್ಯ ಮಲೇರಿಯಾ ಗುರಿಯನ್ನು ತಲುಪೋಣ" ಎಂಬ ಧ್ಯೇಯವಾಕ್ಯದೊಂದಿಗೆ, 'ವಿಶ್ವ ಮಲೇರಿಯ ದಿನ' ವನ್ನು 25 ಏಪ್ರಿಲ್ 2021 ರಂದು ಹಾಗೂ ಜೂನ್ – 2021ರ ಮಾಹೆಯಲ್ಲಿ 'ಮಲೇರಿಯ ವಿರೋಧಿ ಮಾಸಾಚರಣೆ'ಯನ್ನು ರಾಜ್ಯಾದ್ಯಂತ ಕೈಗೊಳ್ಳುವುದರ ಮೂಲಕ ಮಲೇರಿಯ ನಿಯಂತ್ರಣದಲ್ಲಿ ಸಮುದಾಯದ ಪಾತ್ರ ಹಾಗೂ ಸಹಭಾಗಿತ್ವದ ಬಗ್ಗೆ ಜಾಗೃತಿ ಮೂಡಿಸಲಾಗಿದೆ. ಇದೇ ಅಲ್ಲದೇ, ಸಮಸ್ಯಾತ್ಮಕ ಉಪಕೇಂದ್ರ ಹಾಗೂ ಹಳ್ಳಿಗಳಲ್ಲಿ ಜನ ಜಾಗೃತಿ ಮೂಡಿಸುವಲ್ಲಿ ವಿಶೇಷ ಆದ್ಯತೆಯನ್ನು ನೀಡಲಾಗಿದೆ. 20ನೇ ಆಗಸ್ಟ್ 2021ರಂದು 'ವಿಶ್ವ ಸೊಳ್ಳೆ ದಿನ'ವನ್ನು ಆಚರಿಸಿ ಜನಜಾಗೃತಿಯನ್ನು ಮೂಡಿಸಲಾಗಿದೆ.
5. ಕಾರ್ಯಕ್ರಮದ ಯಶಸ್ವಿ ಅನುಷ್ಠಾನಕ್ಕಾಗಿ ಅಗತ್ಯ ಮಾರ್ಗಸೂಚಿ ಹಾಗೂ ಅನುದಾನವನ್ನು ಸಕಾಲಕ್ಕೆ ಬಿಡುಗಡೆ ಮಾಡಲಾಗಿದ್ದು, ಕ್ಷೇತ್ರಮಟ್ಟದಲ್ಲಿ ಕ್ರಿಯಾಯೋಜನೆ ಅನ್ವಯ ಕಾರ್ಯಗತಗೊಳಿಸಲು ಸೂಚನೆಗಳನ್ನು ನೀಡಲಾಗಿದೆ.
6. ಮಾಹೆವಾರು ಕೈಗೊಳ್ಳಬೇಕಾದ ಚಟುವಟಿಕೆಗಳ ಕ್ರಿಯಾ ಯೋಜನೆಯನ್ನು ತಯಾರಿಸಿ ಎಲ್ಲಾ ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳಿಗೆ ಕಳುಹಿಸಿ ಜಿಲ್ಲಾ ಮಟ್ಟದಿಂದ ಗ್ರಾಮ ಮಟ್ಟದವರೆಗೆ ಎಲ್ಲಾ ಹಂತದಲ್ಲಿಯೂ ಈ ಕ್ರಿಯಾ ಯೋಜನೆಯನ್ನು ಅನುಷ್ಠಾನಗೊಳಿಸಲಾಗುತ್ತಿದೆ.
7. ಜಿಲ್ಲಾ ಮಟ್ಟದಲ್ಲಿ ಜಿಲ್ಲಾಧಿಕಾರಿಗಳು ಆಯಾ ಜಿಲ್ಲಾ ಉಸ್ತುವಾರಿ ಸಚಿವರ ನೇತೃತ್ವದಲ್ಲಿ ಕಾಲಕಾಲಕ್ಕೆ ಆರೋಗ್ಯ ಇಲಾಖೆಯ ಇತರ ಕಾರ್ಯಕ್ರಮಗಳ ಪ್ರಗತಿ ಪರಿಶೀಲನಾ ಸಭೆಯನ್ನು ನಡೆಸುವುದರ ಜೊತೆಗೆ ರೋಗ ನಿಯಂತ್ರಣಕ್ಕೆ ಅವಶ್ಯ ಸಲಹೆ ಸೂಚನೆಗಳನ್ನು ನೀಡುತ್ತಾರೆ.
8. ರಾಜ್ಯಮಟ್ಟದಲ್ಲಿ ಯೋಜನಾ ನಿರ್ದೇಶಕರು ಐ.ಡಿ.ಎಸ್.ಪಿ, ರವರು ಸಮಗ್ರ ರೋಗಗಳ ದೈನಂದಿನ ಮಾಹಿತಿಯನ್ನು ಪರಿಶೀಲಿಸಿ, ಕ್ಷೇತ್ರಮಟ್ಟದಲ್ಲಿ ಕೈಗೊಳ್ಳಬೇಕಾದ ನಿಯಂತ್ರಣ ಕ್ರಮಗಳ ಅನುಷ್ಠಾನದ ಕುರಿತು ಸೂಚನೆಗಳನ್ನು ನೀಡುತ್ತಾರೆ.
9. ಸಹ ನಿರ್ದೇಶಕರು – ಎನ್ ವಿ ಬಿ ಡಿ ಸಿ ಪಿ, ಇವರು ಜಿಲ್ಲಾ ಕಾರ್ಯಕ್ರಮಾಧಿಕಾರಿಗಳೊಂದಿಗೆ ಪ್ರತಿ 15 ದಿನಗಳಿಗೊಮ್ಮೆ ವರ್ಚುವಲ್ ಮಾಧ್ಯಮದ ಮೂಲಕ ಕಾರ್ಯಕ್ರಮದ ಪ್ರಗತಿ ಪರಿಶೀಲನೆಯನ್ನು ನಿಯಮಿತವಾಗಿ ಕೈಗೊಳ್ಳುತ್ತಿದ್ದಾರೆ.
10. ಮಲೇರಿಯ ನಿಯಂತ್ರಣದಲ್ಲಿ ಅನಾಫಿಲಿಸ್ ಸೊಳ್ಳೆ ನಿರ್ಮೂಲನಾ ಚಟುವಟಿಕೆಯೇ ಪ್ರಧಾನವಾಗಿದ್ದು, ಶುದ್ಧ ನೀರಿನ ಮೂಲಗಳಾದ ಕೆರೆ, ಬಾವಿ, ಕಟ್ಟೆ, ಕುಂಟೆಗಳು, ಕಲ್ಯಾಣಿಗಳಲ್ಲಿ ಲಾರ್ವಾಹಾರಿ ಮೀನುಗಳನ್ನು ಬಿಡಲಾಗಿದೆ.
11. ಯಾವುದೇ ವ್ಯಕ್ತಿಯಲ್ಲಿ ಜ್ವರ ಕಂಡುಬಂದಲ್ಲಿ ರಕ್ತ ಲೇಪನವನ್ನು ಸಂಗ್ರಹಿಸಿ, 24ಗಂಟೆಯ ಒಳಗೆ ರೋಗ ಪತ್ತೆಗಾಗಿ ಪ್ರಯೋಗಾಲಯಗಳಿಗೆ ಕಳುಹಿಸಲಾಗುತ್ತಿದೆ.
12. ತ್ವರಿತ ಪತ್ತೆ ಕಿಟ್ಟುಗಳು ಮತ್ತು ರಕ್ತ ಲೇಪನಗಳನ್ನು ಸಂಗ್ರಹಿಸಿ, ಉಚಿತವಾಗಿ ಪರೀಕ್ಷಿಸಿ, ದೃಢಪಟ್ಟ ಪ್ರಕರಣಗಳಿಗೆ ತೀವ್ರ ಚಿಕಿತ್ಸೆಯನ್ನು ಉಚಿತವಾಗಿ ತಕ್ಷಣವೇ ನೀಡಲು ರಾಜ್ಯಾದ್ಯಂತ ವ್ಯವಸ್ಥೆಗೊಳಿಸಲಾಗಿದೆ.
13. ಖಾಸಗಿ ವೈದ್ಯರುಗಳಿಗೆ ಎಲ್ಲಾ ಜಿಲ್ಲೆಗಳಲ್ಲಿ ಐ.ಎಂ.ಎ ಮೂಲಕ ಸೂಕ್ತ ಮಾಹಿತಿ ಹಾಗೂ ರೋಗ ನಿರ್ವಹಣೆಯ ಬಗ್ಗೆ ಪುನರ್‌ಮನನ ತರಬೇತಿ ನೀಡಲಾಗುತ್ತಿದೆ.
14. ಎಲ್ಲಾ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಆಸ್ಪತ್ರೆಗಳಲ್ಲಿ ಮಲೇರಿಯ ರೋಗಿಗಳ ಚಿಕಿತ್ಸೆ ಮತ್ತು ನಿರ್ವಹಣೆಗೆ ಸೌಲಭ್ಯಗಳನ್ನು ಕಲ್ಪಿಸಲಾಗಿದೆ. ಅಲ್ಲದೆ ಎಲ್ಲಾ ಪ್ರಾಥಮಿಕ ಆರೋಗ್ಯ ಕೇಂದ್ರದ ವೈದ್ಯಾಧಿಕಾರಿಗಳಿಗೆ ಅವಶ್ಯ ತರಬೇತಿ ನೀಡಿ ಪ್ರಾಥಮಿಕ ಹಂತದ ಮಲೇರಿಯ ರೋಗಿಗಳನ್ನು ಚಿಕಿತ್ಸೆ ಮಾಡಲು ವ್ಯವಸ್ಥೆ ಮಾಡಲಾಗಿದೆ.

15. ಮಲೇರಿಯ ಸಮಸ್ಯಾತ್ಮಕ ಜಿಲ್ಲೆಗಳಲ್ಲಿ ಒಳಾಂಗಣ ಕ್ರಿಮಿನಾಶಕ ಸಿಂಪಡಣಾ ಕಾರ್ಯವು ನಡೆಯುತ್ತಿದೆ. ಹಾಗೂ ದೀರ್ಘಕಾಲ ಕೀಟನಾಶಕ ಉಪಚರಿತ ಸೊಳ್ಳೆಪರದೆಗಳನ್ನು ರೋಗವಾಹಕಗಳ ಸಾಂದ್ರತೆ ಹೆಚ್ಚಾಗಿರುವ ಪ್ರದೇಶಗಳಲ್ಲಿನ ಕುಟುಂಬಗಳಿಗೆ ಉಚಿತವಾಗಿ ವಿತರಿಸಲಾಗುತ್ತಿದೆ.
16. ಮಲೇರಿಯಾ ನಿಯಂತ್ರಣದ ಬಗ್ಗೆ ಜನ ಜಾಗೃತಿ ಮೂಡಿಸಲು ಬಸ್ ಬ್ರ್ಯಾಡಿಂಗ್ ಹಾಗೂ ಆಟೋ ಬ್ರ್ಯಾಂಡಿಗ್ ಅನ್ನು ಕೈಗೊಳ್ಳಲಾಗಿದೆ.
17. ಇಲಾಖೆಯ ಇತರ ಕಾರ್ಯಕ್ರಮಗಳ ಪ್ರಗತಿ ಪರಿಶೀಲನಾ ಸಭೆಯಲ್ಲಿ ಮಾನ್ಯ ಆರೋಗ್ಯ ಮತ್ತು ಕು.ಕ.ಸಚಿವರು ಮಲೇರಿಯಾ ನಿಯಂತ್ರಣದ ಬಗ್ಗೆ ಚರ್ಚಿಸಿ ಅಗತ್ಯ ಸಲಹೆ ಸೂಚನೆಗಳನ್ನು ನೀಡಿದ್ದಾರೆ.

ಒಟ್ಟಾರೆ ಕಳೆದ 3 ವರ್ಷಗಳಲ್ಲಿ ಮಲೇರಿಯಾ ಪ್ರಕರಣಗಳ ಸಂಖ್ಯೆಯು ಗಣನೀಯವಾಗಿ ಇಳಿಮುಖವಾಗಿದ್ದು, ರಾಜ್ಯದಲ್ಲಿ ಮಲೇರಿಯಾ ರೋಗವು ನಿವಾರಣಾ ಹಂತವನ್ನು ತಲುಪಿದೆ. ಮುಂದುವರೆದು, 2022ರ ವೇಳೆಗೆ ಈ ರೋಗವನ್ನು ರಾಜ್ಯದಲ್ಲಿ ಸಂಪೂರ್ಣವಾಗಿ ಶೂನ್ಯ ಹಂತಕ್ಕೆ ತರಲು ಮಲೇರಿಯಾ ನಿವಾರಣಾ ಚೌಕಟ್ಟು ಮಾರ್ಗದರ್ಶಿಯನ್ನು ಜಾರಿಗೊಳಿಸಲಾಗಿದೆ. *ಇಲಾಖೆಯು ಮಲೇರಿಯಾ ನಿಯಂತ್ರಣಕ್ಕಾಗಿ ಭಾರತ ಸರ್ಕಾರದ ಮಾರ್ಗಸೂಚಿಯಂತೆ ಎಲ್ಲಾ ನಿಯಂತ್ರಣ ಕ್ರಮಗಳನ್ನು ಮುಂದುವರೆಸಿರುತ್ತದೆ.*

**ಡೆಂಗಿ, ಚಿಕುಂಗುನ್ಯಾ ರೋಗಗಳನ್ನು ತಡೆಗಟ್ಟಲು ಇಲಾಖೆಯು ಕೈಗೊಂಡಿರುವ ಚಟುವಟಿಕೆಗಳ ವಿವರ.**

1. ಡೆಂಗಿ ಜ್ವರವನ್ನು ಕರ್ನಾಟಕ ಸಾರ್ವಜನಿಕ ಆರೋಗ್ಯ ನಿಯಮಗಳ ಅಡಿಯಲ್ಲಿ ಅಧಿಸೂಚಿತ ರೋಗವೆಂದು ಪ್ರಕಟಿಸಲಾಗಿದ್ದು, (Dengue including DHF & DSS, is under Notifiable disease Act under the Karnataka Public Health Act vide Govt. Notification NO:HFW/30/SMM/98, Dt:13.3.1998) ಡೆಂಗಿ ಜ್ವರದ ಮುನ್ನೆಚ್ಚರಿಕೆ ಕ್ರಮವಾಗಿ ಎಲ್ಲಾ ಖಾಸಗಿ ಆರೋಗ್ಯ ಸಂಸ್ಥೆಗಳೂ ಸಹ ಡೆಂಗಿ ಪ್ರಕರಣಗಳ ಮಾಹಿತಿಯನ್ನು ಆರೋಗ್ಯ ಇಲಾಖೆಗೆ ಸಲ್ಲಿಸುವುದು ಕಡ್ಡಾಯವಾಗಿರುತ್ತದೆ.
2. ಮುಂಗಾರು ಪೂರ್ವ, ಮುಂಗಾರು ಹಾಗೂ ಮುಂಗಾರಿನ ನಂತರದ ದಿನಗಳಲ್ಲಿ ಡೆಂಗೀ ಜ್ವರ ಪ್ರಸರಣವು ಅಧಿಕವಾಗುವ ಹಿನ್ನೆಲೆಯಲ್ಲಿ ವರ್ಷದ ಆರಂಭದಲ್ಲಿಯೇ, ಎಲ್ಲಾ ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳಿಗೆ ಮಾರ್ಗಸೂಚಿ ಸುತ್ತೋಲೆಯನ್ನು ಕಳುಹಿಸಿದ್ದು, ಡೆಂಗಿ ನಿಯಂತ್ರಣಕ್ಕೆ ಸನ್ನದ್ಧ ಸ್ಥಿತಿಯಲ್ಲಿರಲು ಸೂಚಿಸಲಾಗಿದೆ.
3. ಪ್ರವಾಹ ಹಾಗೂ ನಂತರದ ಸಮಯದಲ್ಲಿ ಈಡಿಸ್ ಸೊಳ್ಳೆಗಳ ಉತ್ಪತ್ತಿ ತಾಣ ನಾಶ ಹಾಗೂ ಡೆಂಗೀ ನಿಯಂತ್ರಣದ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಅಗ್ಗತ್ಯ ಕ್ರಮಗಳ ಕುರಿತು ಮಾರ್ಗದರ್ಶಿ ಸುತ್ತೋಲೆಗಳನ್ನು ನೀಡಲಾಗಿದೆ.
4. ಡೆಂಗಿ ರೋಗದ ಶೀಘ್ರ ಪತ್ತೆಗಾಗಿ ಆರೋಗ್ಯ ಕಾರ್ಯಕರ್ತರು ಹಾಗೂ ಆಶಾ ಕಾರ್ಯಕರ್ತೆಯರು ಮನೆಮನೆಗೆ ಭೇಟಿ ನೀಡಿ ಜ್ವರ ಸಮೀಕ್ಷಾ ಕಾರ್ಯವನ್ನು ನಿರಂತರವಾಗಿ ಮಾಡುತ್ತಿದ್ದಾರೆ. ಇದೇ ಸಮಯದಲ್ಲಿ ಡೆಂಗೀ ಜ್ವರದ ಲಕ್ಷಣಗಳು ಹಾಗೂ ಈಡಿಸ್ ಸೊಳ್ಳೆಗಳು ಉತ್ಪತ್ತಿತಾಣ ಮತ್ತು ಅವುಗಳ ನಿರ್ಮೂಲನೆಯ ಕುರಿತು ಸಾರ್ವಜನಿಕರಿಗೆ ಮಾಹಿತಿ ನೀಡಿ ಅರಿವು ಮೂಡಿಸುತ್ತಿದ್ದಾರೆ.
5. ಶಂಕಿತ ಡೆಂಗೀ ಪ್ರಕರಣಗಳ ರಕ್ತದ ಮಾದರಿಗಳನ್ನು ಎಲ್ಲಾ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿತವಾದ ಸೆಂಟಿನಲ್ ಪ್ರಯೋಗಾಲಯಗಳಲ್ಲಿ ಉಚಿತವಾಗಿ ಪರೀಕ್ಷಿಸಲಾಗುತ್ತಿದೆ. ಇದಕ್ಕಾಗಿ, ಡೆಂಗಿ ಪತ್ತೆಗಾಗಿ ಬೇಕಾದ ELISA ಆಧಾರಿತ ಎನ್‌ಎಸ್ 1 ಹಾಗೂ ಐಜಿಎಂ ಕಿಟ್ಟುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಎಲ್ಲಾ ಪ್ರಯೋಗಾಲಯಗಳಿಗೆ ಸರಬರಾಜು ಮಾಡಲಾಗಿದೆ.
6. ಎಲ್ಲಾ ತಾಲ್ಲೂಕು ಹಾಗೂ ಜಿಲ್ಲಾ ಆಸ್ಪತ್ರೆಗಳಲ್ಲಿ ಡೆಂಗಿಜ್ವರ ಪ್ರಕರಣಗಳ ನಿರ್ವಹಣೆ ಮತ್ತು ರೋಗಲಕ್ಷಣಗಳಿಗೆ ಅನುಗುಣವಾದ ಚಿಕಿತ್ಸೆಗೆ ವ್ಯವಸ್ಥೆ ಮಾಡಲಾಗಿದೆ. ಅಗತ್ಯವಿದ್ದಲ್ಲಿ ಹೆಚ್ಚುವರಿ ವಾರ್ಡು ಗಳ ವ್ಯವಸ್ಥೆ ಮಾಡಲು ಸೂಚಿಸಲಾಗಿದೆ. ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಸಾಮಾನ್ಯ ಡೆಂಗಿ ಜ್ವರಕ್ಕೆ ಬೇಕಾದ ನಿರ್ವಹಣಾ ವ್ಯವಸ್ಥೆಯನ್ನು ಸಹ ಒದಗಿಸಲಾಗಿದೆ. ಡೆಂಗಿ ರೋಗ ನಿರ್ವಹಣೆಗೆ ಬೇಕಾಗುವ ಜೀವರಕ್ಷಕ ಔಷಧಿಗಳು ಮತ್ತು ರೋಗಲಕ್ಷಣಗಳಿಗೆ ಅನುಗುಣವಾಗಿ ಬೇಕಾದ ಔಷಧೋಪಚಾರಗಳನ್ನು ಜಿಲ್ಲಾ ಮಟ್ಟದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಇರಿಸಲಾಗಿದೆ.
7. ಡೆಂಗಿ ರಕ್ತಸ್ರಾವಜ್ವರ (ಡೆಂಗಿ ಹೆಮರೇಜಿಕ್ ಫೀವರ್) ನಿರ್ವಹಣೆಗಾಗಿ, ಜಿಲ್ಲಾ ಮಟ್ಟದಲ್ಲಿ blood componentಗಳ ಲಭ್ಯತೆಯ ಬಗ್ಗೆ ಇಲಾಖೆಯ ಅಂತರ್ಜಾಲದಲ್ಲಿ ಅಪ್‌ಲೋಡ್ ಮಾಡಲಾಗಿದೆ ಹಾಗೂ ಈ ಮಾಹಿತಿಯನ್ನು ಪ್ರತಿ ದಿನವು ಪರಿಷ್ಕರಿಸಿ ಪ್ರಕಟಿಸಲಾಗುತ್ತಿದೆ. (www.karhfw.gov.in) (jeevasanjivini)
8. ಡೆಂಗಿ ಖಚಿತ ಪಡಿಸಿಕೊಳ್ಳಲು ಎಲಿಸಾ ಆಧಾರಿತ ಪ್ರತಿ ಪರೀಕ್ಷೆಗೆ ರೂ 250/– ಮೀರದಂತೆ ಶುಲ್ಕವನ್ನು ನಿಗದಿಗೊಳಿಸಿ ಖಾಸಗಿ ಆಸ್ಪತ್ರೆಗಳಿಗೆ ಸೂಚನೆ ನೀಡಲಾಗಿದೆ. ಹಾಗೂ ಒಂದು ಯುನಿಟ್ ಪ್ಲೇಟ್‌ಲೆಟ್‌ಗಳಿಗೆ ರೂ.850/–ಮೀರಬಾರದೆಂದು ನಿಗದಿಪಡಿಸಲಾಗಿದೆ.

9. ರಾಜ್ಯ ಮಟ್ಟದಲ್ಲಿ "ಮರಣ ತಪಾಸಣಾ ಸಮಿತಿ (Dengue Death Audit Committee)" ಯನ್ನು ರಚಿಸಲಾಗಿದ್ದು, ಈ ಸಮಿತಿಯು ಡೆಂಗಿ ರೋಗದಿಂದ ಸಂಭವಿಸಿರಬಹುದಾದ ಎಲ್ಲಾ ಮರಣ ಪ್ರಕರಣಗಳ ಸೂಕ್ತ ತಪಾಸಣೆ ನಡೆಸಿ ದೃಢೀಕರಿಸಲಾಗುತ್ತಿದೆ.

10. ಡೆಂಗೀ ನಿಯಂತ್ರಣಕ್ಕೆ ಈಡಿಸ್ ಸೊಳ್ಳೆಗಳ ಉತ್ಪತ್ತಿ ತಾಣ ನಾಶವು ಪ್ರಮುಖವಾಗಿರುವುದರಿಂದ, ಗ್ರಾಮೀಣ ಪ್ರದೇಶಗಳಲ್ಲಿ ಆರೋಗ್ಯ ಕಾರ್ಯಕರ್ತರು ಪ್ರತಿ ಮನೆಯ ಒಳಾಂಗಣ ಮತ್ತು ಹೊರಾಂಗಣದಲ್ಲಿನ ನೀರಿನ ಶೇಖರಣೆಗಳಲ್ಲಿ ಈಡೀಸ್ ಸೊಳ್ಳೆ ಉತ್ಪತ್ತಿ ತಾಣಗಳನ್ನು ಪತ್ತೆಹಚ್ಚಿ ಅವುಗಳ ನಿರ್ಮೂಲನೆಗೆ ಕ್ರಮಕೈಗೊಳ್ಳುತ್ತಿದ್ದಾರೆ.

11. ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಪ್ರತಿ ತಿಂಗಳ ಮೊದಲನೇ ಹಾಗೂ ಮೂರನೇ ಶುಕ್ರವಾರದಂದು ಎಲ್ಲಾ ಆರೋಗ್ಯ ಸಿಬ್ಬಂದಿಗಳಿಂದ ಮನೆ ಮನೆಗೆ ಭೇಟಿನೀಡಿ ಲಾರ್ವಾ ಸಮೀಕ್ಷೆ ನಡೆಸಲಾಗುತ್ತಿದೆ.

12. ಆಶಾ ಕಾರ್ಯಕರ್ತೆಯರು ಈಡಿಸ್ ಲಾರ್ವಾಸಮೀಕ್ಷೆ ಹಾಗೂ ಉತ್ಪತ್ತಿ ತಾಣ ನಾಶಗೊಳಿಸುವ ಚಟುವಟಿಕೆಯನ್ನು ನಿರಂತರವಾಗಿ ಕೈಗೊಳ್ಳುತ್ತಿದ್ದು, ಇದಕ್ಕಾಗಿ ವಿ.ಹೆಚ್.ಎಸ್.ಎನ್.ಸಿ ಅನುದಾನದಿಂದ ಮಾಸಿಕ ಗೌರವ ಧನವಾಗಿ ರೂ.200/- ನೀಡಲಾಗುತ್ತಿದೆ.

13. ರಾಜ್ಯದಲ್ಲಿ, ಅಕ್ಟೋಬರ್ -2021ರ ಮಾಹೆಯಲ್ಲಿ 44,77,539 ಮನೆಗಳಲ್ಲಿ ಈಡೀಸ್ ಲಾರ್ವಾ ಸಮೀಕ್ಷೆ ನಡೆಸಿದ್ದು, ಅದರಲ್ಲಿ 1,33,552 ಮನೆಗಳಲ್ಲಿ ಈಡೀಸ್ ಲಾರ್ವಾ ಕಂಡುಬಂದಿದ್ದು, ಈ ಮನೆಗಳಲ್ಲಿ ಒಟ್ಟು 1,87,24,401 ತಾಣಗಳನ್ನು ಪರಿಶೀಲಿಸಿ, 1,52,833 ತಾಣಗಳಲ್ಲಿ ಕಂಡುಬಂದ ಈಡೀಸ್ ಲಾರ್ವಾಗಳನ್ನು ನಾಶಪಡಿಸಲಾಗಿದೆ. ಸದರಿ ಚಟುವಟಿಕೆಯನ್ನು ಪ್ರತಿ ಮಾಹೆಯು ನಿರಂತರವಾಗಿ ನಡೆಸಲಾಗುತ್ತಿದೆ.

14. ಈಡಿಸ್ ಲಾರ್ವಾ ಸಮೀಕ್ಷೆ ಹಾಗೂ ಉತ್ಪತ್ತಿ ತಾಣ ನಾಶ ಚಟುವಟಿಕೆಗೆ ಅಗತ್ಯವಿರುವ ಟೆಮಿಫಾಸ್ ದ್ರಾವಣ ಹಾಗೂ ತುರ್ತು ಸಂದರ್ಭಗಳಲ್ಲಿ ಒಳಾಂಗಣ ಧೂಮೀಕರಣಕ್ಕೆ ಬಳಸುವ ಪೈರಿಥ್ರಮ್ ಎಕ್ಸ್‌ಟ್ರಾಕ್ಟ್ ರಾಸಾಯನಿಕಗಳ ಅಗತ್ಯ ದಾಸ್ತಾನು ಜಿಲ್ಲೆಗಳಲ್ಲಿ ಲಭ್ಯವಿದ್ದು ಸಮರ್ಪಕವಾಗಿ ಬಳಸಲಾಗುತ್ತಿದೆ.

15. ಡೆಂಗೀ ಮುನ್ನೆಚ್ಚರಿಕೆ ಹಾಗೂ ನಿಯಂತ್ರಣ ಕುರಿತಂತೆ, ಜಿಲ್ಲಾವಾರು ಸ್ಥಿತಿಗತಿಗಳನ್ನು ಪರಿಶೀಲಿಸಿ, ಅಗತ್ಯ ಕ್ರಮಗಳನ್ನು ಕೈಗೊಳ್ಳುವ ನಿಟ್ಟಿನಲ್ಲಿ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 8.6.2021 ರಂದು, ಎಲ್ಲಾ ಜಿಲ್ಲಾ ರೋಗವಾಹಕ ಆಶ್ರಿತ ರೋಗಗಳ ನಿಯಂತ್ರಣಾಧಿಕಾರಿಗಳು ಹಾಗೂ ವಿಭಾಗೀಯ ಸಹ ನಿರ್ದೇಶಕರು, ಇವರೊಂದಿಗೆ ಹಾಗೂ ದಿನಾಂಕ 2.7.2021 ಹಾಗೂ 19.11.2021 ರಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಡೆಂಗೀ ನಿಯಂತ್ರಣದ ಕುರಿತು ಕೈಗೊಳ್ಳಬೇಕಾದ ಅಗತ್ಯ ಕ್ರಮಗಳ ಕುರಿತು ಸೂಚನೆಗಳನ್ನು ನೀಡಲಾಗಿದೆ.

16. ಸಹ ನಿರ್ದೇಶಕರು - ಎನ್ ವಿ ಬಿ ಡಿ ಸಿ ಪಿ, ಇವರ ಅಧ್ಯಕ್ಷತೆಯಲ್ಲಿ ವಲಯವಾರು ಸಭೆಯನ್ನು ಪ್ರತಿ ಹದಿನೈದು ದಿನಗಳಿಗೊಮ್ಮೆ ವರ್ಚುವಲ್ ಮಾಧ್ಯಮದ ಮೂಲಕ ನಡೆಸಲಾಗುತ್ತಿದ್ದು, ಜಿಲ್ಲಾವಾರು ಡೆಂಗೀ ಪರಿಸ್ಥಿತಿಯನ್ನು ವಿಶ್ಲೇಷಿಸಿ, ನಿಯಂತ್ರಣಕ್ಕಾಗಿ ಅಗತ್ಯ ಸಲಹೆ ಸೂಚನೆಗಳನ್ನು ನೀಡಲಾಗುತ್ತಿದೆ.

17. ದಿನಾಂಕ: 16.5.2021 ರಾಷ್ಟ್ರೀಯ ಡೆಂಗೀ ದಿನವನ್ನು ಆಚರಿಸಲಾಗಿದ್ದು, ಅದರಂತೆ, ಡೆಂಗೀ ನಿಯಂತ್ರಣದಲ್ಲಿ ಸಮುದಾಯದ ಪಾತ್ರವನ್ನು ಮನವರಿಕೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಅಗತ್ಯ ಶಿಕ್ಷಣವನ್ನು ನೀಡಿ, ಅರಿವು ಮೂಡಿಸಲಾಗಿದೆ. "ಡೆಂಗೀ ತಡೆಗಟ್ಟುವಿಕೆ ಮನೆಯಿಂದಲೇ ಪ್ರಾರಂಭ" - ಈ ವರ್ಷದ ಧ್ಯೇಯವಾಕ್ಯವಾಗಿದೆ.

18. ಮೇ 2021ನೇ ಮಾಹೆಯಲ್ಲಿ ಡೆಂಗೀ ವಿರೋಧಿ ಮಾಸಾಚರಣೆಯನ್ನು ಆಚರಿಸಲಾಗಿದ್ದು, ವಿವಿಧ ಮಾಧ್ಯಮಗಳ ಮೂಲಕ ಸಮುದಾಯಕ್ಕೆ ಅರಿವು ಮೂಡಿಸಲಾಗಿದೆ. ಅದರಂತೆ, ದೂರದರ್ಶನ ಹಾಗೂ ರೇಡಿಯೋಗಳಲ್ಲಿ ನಡೆದ ಸಂದರ್ಶನದಲ್ಲಿ ಹಾಗೂ ಫೋನ್ - ಇನ್ ಕಾರ್ಯಕ್ರಮದಲ್ಲಿ ರಾಜ್ಯ ಹಾಗೂ ಜಿಲ್ಲಾ ಮಟ್ಟದ ಅಧಿಕಾರಿಗಳು ಪಾಲ್ಗೊಂಡು ಅಗತ್ಯ ಮಾಹಿತಿಯನ್ನು ಹಾಗೂ ಡೆಂಗೀ ನಿಯಂತ್ರಣದಲ್ಲಿ ಸಮುದಾಯದ ಪಾತ್ರದ ಕುರಿತು ಸಂಪೂರ್ಣ ಮಾಹಿತಿಯನ್ನು ನೀಡಿರುತ್ತಾರೆ.

19. ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಡೆಂಗಿ & ಚಿಕುಂಗುನ್ಯ ನಿಯಂತ್ರಣ ಹಾಗೂ ಮುಂಜಾಗ್ರತೆಗಾಗಿ ಚುನಾಯಿತ ಪ್ರತಿನಿಧಿಗಳು ವಿವಿಧ ಇಲಾಖೆ ಅಧಿಕಾರಿಗಳು ಸ್ಥಳೀಯ ಸಂಸ್ಥೆಯ ಪ್ರತಿನಿಧಿಗಳು, ಪತ್ರಿಕಾ ಮತ್ತು ಮಾಧ್ಯಮ ಮಿತ್ರರು ಸ್ತ್ರೀಶಕ್ತಿ ಸಂಘದ ಸದ್ಯಸರಿಗೆ ಆಡ್ವಕೇಸಿ ಕಾರ್ಯಗಾರಗಳ ಮೂಲಕ ಅರಿವು ಮೂಡಿಸಲಾಗಿದೆ.

20. ಡೆಂಗಿ ಮತ್ತು ಚಿಕುಂಗುನ್ಯ ಬಗ್ಗೆ ಜನರಲ್ಲಿ/ಸಾರ್ವಜನಿಕರಲ್ಲಿ ಅರಿವು ಮೂಡಿಸಲು ರೈಲು ಬ್ರ್ಯಾಂಡಿಂಗ್, ಕೆ.ಎಸ್.ಆರ್.ಟಿ.ಸಿ ಬಸ್ ಬ್ರ್ಯಾಂಡಿಂಗ್, ಆಟೋ ಬ್ರ್ಯಾಂಡಿಂಗ್ ಮತ್ತು ಮೆಟ್ರೋ ರೈಲು ಹಾಗೂ ಸಾರ್ವಜನಿಕ ಪ್ರದೇಶಗಳಲ್ಲಿ ಹೋರ್ಡಿಂಗ್, ಬಸ್ ನಿಲ್ದಾಣಗಳಲ್ಲಿ ಡಿಜಿಟಲ್ ಜಾಹಿರಾತು ಹಾಗೂ ಇತರೆ IEC ಚಟುವಟಿಕೆಗಳನ್ನು ಕೈಗೊಂಡಿರುತ್ತೇವೆ.

21. ಸಾಮಾಜಿಕ ಜಾಲತಾಣಗಲ್ಲಿ ಮಾನ್ಯ ಮುಖ್ಯಮಂತ್ರಿಗಳ ಹಾಗೂ ಆರೋಗ್ಯ ಸಚಿವರ ವಿಡಿಯೋ ಆಡಿಯೋ ತುಣುಕುಗಳ ಜಾಹಿರಾತುಗಳ ಮೂಲಕ ಪ್ರದರ್ಶನ ಮಾಡಲಾಗುತ್ತಿದೆ.

22. ಜಿಲ್ಲಾಮಟ್ಟದಲ್ಲಿ ಜಿಲ್ಲಾಧಿಕಾರಿಗ್ಗಳ ಅಧ್ಯಕ್ಷತೆಯಲ್ಲಿ ಅಂತರ ಇಲಾಖಾ ಸಮನ್ವಯ ಸಮಿತಿ ಸಭೆಗಳಲ್ಲಿ ಈಡಿಸ್ ನಿಯಂತ್ರಣ ಹಾಗೂ ಘನತ್ಯಾಜ್ಯದ ನಿರ್ವಹಣೆ, ಸಮರ್ಪಕ ನೀರು ಸರಬರಾಜು, ಇತ್ಯಾದಿಗಳ ಕುರಿತು ಆರೋಗ್ಯ

ಇಲಾಖೆಯೊಂದಿಗೆ ಇತರ ಇಲಾಖೆಗಳ ಸಹಕಾರವನ್ನು ಪಡೆದು ಡೆಂಗಿ ನಿಯಂತ್ರಣ ಕ್ರಮಗಳ ಅನುಷ್ಠಾನ ಕೈಗೊಳ್ಳಲಾಗುತ್ತಿದೆ.

23. ರಾಜ್ಯ ಹಾಗೂ ಜಿಲ್ಲಾ ಮಟ್ಟದಲ್ಲಿ ವೈದ್ಯಕೀಯ ಹಾಗು ವೈದ್ಯೇತರ ಸಿಬ್ಬಂದಿಗಳಿಗೆ, ಕಾಲಕಾಲಕ್ಕೆ ತರಬೇತಿ ನೀಡಲಾಗುತ್ತಿದೆ.
24. "ಇಂಡಿಯಾ ಫೈಟ್ಸ್ ಡೆಂಗಿ" ಮೊಬೈಲ್ ಅಪ್ಲಿಕೇಶನ್‌ನ ಮೂಲಕ, ಹತ್ತಿರದ ಆರೋಗ್ಯ ಸೌಲಭ್ಯ, ಪ್ಲೇಟ್‌ಲೆಟ್‌ಗಳ ಲಭ್ಯತೆ, ಚಿಕಿತ್ಸೆ ಮತ್ತು ರೋಗ ನಿರ್ವಹಣೆ ದೃಷ್ಟಿಯಿಂದ ಮತ್ತು ರೋಗತಡೆಗಟ್ಟುವಿಕೆ ಕೈಗೊಳ್ಳುವ ಕ್ರಮಗಳ ಬಗ್ಗೆ www.nhp.gov.in/mobile-app/ ಆ್ಯಪ್‌ನಲ್ಲಿ ವಿವರಿಸಿದ್ದು, ಸಾರ್ವಜನಿಕರು ಇದರ ಪ್ರಯೋಜನವನ್ನು ಪಡೆಯುತ್ತಿದ್ದಾರೆ.

ಒಟ್ಟಾರೆಯಾಗಿ, ಡೆಂಗಿ ನಿಯಂತ್ರಣಕ್ಕಾಗಿ ಎಲ್ಲಾ ಮುನ್ನೆಚ್ಚರಿಕಾ ಕ್ರಮಗಳ ಸಮರ್ಪಕ ಅನುಷ್ಠಾನದಿಂದ ರಾಜ್ಯದಲ್ಲಿ ಡೆಂಗೀ ಪರಿಸ್ಥಿತಿಯು ಹತೋಟಿಯಲ್ಲಿದೆ ಎಂಬ ಅಂಶವನ್ನು ತಮ್ಮ ಅವಗಾಹನೆಗೆ ಸಲ್ಲಿಸಲಾಗಿದೆ.

09/12/21

ಸಹ ನಿರ್ದೇಶಕರು - ಎನ್ ವಿ ಬಿ ಡಿ ಸಿ ಪಿ
ಆ ಕು ಕ ಸೇವೆಗಳ ನಿರ್ದೇಶನಾಲಯ
ಆರೋಗ್ಯ ಸೌಧ, ಮಾಗಡಿ ರಸ್ತೆ,
ಬೆಂಗಳೂರು - 560023

# ಕರ್ನಾಟಕ ವಿಧಾನಸಭೆ
(15ನೇ ವಿಧಾನಸಭೆ, 11ನೇ ಅಧಿವೇಶನ)

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 670

ಸದಸ್ಯರ ಹೆಸರು : ಡಾ|| ಅಜಯ್ ಧರ್ಮ ಸಿಂಗ್ (ಜೇವರ್ಗಿ)

ಉತ್ತರಿಸುವ ದಿನಾಂಕ : 16.12.2021

ಉತ್ತರಿಸುವವರು : ಅರಣ್ಯ, ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕಲಬುರಗಿ ಪ್ರಾದೇಶಿಕ ಅರಣ್ಯ ವಿಭಾಗದ ಜೇವರ್ಗಿ ತಾಲ್ಲೂಕಿನ ಗಂವ್ಹಾರ ಗ್ರಾಮದ ಸರ್ವೆ ನಂ.357, 358, 359/3 ಹಾಗೂ 341ರಲ್ಲಿ ಕಾಯ್ದಿರಿಸಿದ 105 ಎಕರೆ ಅರಣ್ಯ ಪ್ರದೇಶವು ಬೀದರ್-ಚಾಮರಾಜನಗರ ರಾಷ್ಟ್ರೀಯ ಹೆದ್ದಾರಿಗೆ ಹೊಂದಿಕೊಂಡು ಜೇವರ್ಗಿ ಪಟ್ಟಣಕ್ಕೆ ಹತ್ತಿರವಿದ್ದು, ಈ ಪ್ರದೇಶದಲ್ಲಿ ಟ್ರೀ-ಪಾರ್ಕ್ ನಿರ್ಮಾಣ ಮಾಡುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹೌದು.<br><br>ಟ್ರೀ-ಪಾರ್ಕ್ ನಿರ್ಮಾಣ ಮಾಡುವ ಪ್ರಸ್ತಾವನೆಯು ಬಂದಿರುತ್ತದೆ.<br><br>ಆದರೆ, ಪ್ರಸ್ತಾಪಿತ ಸ್ಥಳವು ನಗರ ವ್ಯಾಪ್ತಿಯಿಂದ 12 ಕಿಮೀ ದೂರದಲ್ಲಿದ್ದು, ವೃಕ್ಷೋದ್ಯಾನ ನಿರ್ಮಾಣಕ್ಕೆ ಸೂಕ್ತವಿರುವುದಿಲ್ಲ. ಸದರಿ ವಿಧಾನ ಸಭಾ ಕ್ಷೇತ್ರದಲ್ಲಿ ಇತರೆ ಯಾವುದಾದರೂ ಸೂಕ್ತ ಸ್ಥಳವಿದ್ದಲ್ಲಿ ವೃಕ್ಷೋದ್ಯಾನದ ಮಾರ್ಗಸೂಚಿಯ ಕೈಪಿಡಿಯನ್ವಯ ಪ್ರಸ್ತಾವನೆಯನ್ನು ಸಲ್ಲಿಸಲು ವೃತ್ತಾಧಿಕಾರಿಗಳಿಗೆ ಸೂಚಿಸಲಾಗಿದೆ. |
| ಆ) | ಇದ್ದಲ್ಲಿ, ಯಾವ ಕಾಲಮಿತಿಯಲ್ಲಿ ನಿರ್ಮಾಣ ಮಾಡಲಾಗುವುದು? (ಸಂಪೂರ್ಣ ವಿವರ ನೀಡುವುದು) | ಸೂಕ್ತ ಸ್ಥಳ ಹಾಗೂ ಅನುದಾನದ ಲಭ್ಯತೆಯ ಮೇರೆಗೆ ಕ್ರಮವಹಿಸಲಾಗುವುದು. |

ಸಂಖ್ಯೆ: ಅಪಜೀ 95 ಎಫ್‌ಟಿಎಸ್ 2021

(ಉಮೇಶ್ ವಿ. ಕತ್ತಿ)
ಅರಣ್ಯ, ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 672
ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ. (ಮಂಗಳೂರು)
ಉತ್ತರಿಸಬೇಕಾದ ದಿನಾಂಕ : 16.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಕೋವಿಡ್ ಕಾರಣದಿಂದ ಮುಚ್ಚಿದ್ದ ಶಾಲೆಗಳು ಮಕ್ಕಳಿಗಾಗಿ ತೆರೆಯುತ್ತಿದ್ದಂತೆ ಶಾಲೆಗಳಲ್ಲಿ ಹಲವು ಮೂಲಭೂತ ಸೌಲಭ್ಯಗಳ ಕೊರತೆ ಕಂಡುಬರುತ್ತಿರುವ ವಿಚಾರ ಸರ್ಕಾರದ ಗಮನದಲ್ಲಿದೆಯೇ; | ಹೌದು. |
| ಆ) | ಇದ್ದಲ್ಲಿ, ಈ ಕುರಿತು ಕೈಗೊಂಡ ಕ್ರಮಗಳೇನು; ಶಾಲಾ ಕಟ್ಟಡಗಳ ಮೂಲಭೂತ ಸೌಲಭ್ಯಗಳಿಗೆ ಸರ್ಕಾರ ಈ ವರ್ಷ ಅನುದಾನ ಬಿಡುಗಡೆ ಮಾಡಿದೆಯೇ? (ಜಿಲ್ಲಾವಾರು ಮಾಹಿತಿ ಒದಗಿಸುವುದು) | ಶಾಲೆಗಳಲ್ಲಿ ಕುಡಿಯುವ ನೀರು, ಶೌಚಾಲಯ ನಿರ್ವಹಣೆ, ಶಾಲಾ ಕೊಠಡಿ ದುರಸ್ಥಿ ಮುಂತಾದ ಮೂಲಭೂತ ಸೌಕರ್ಯಗಳನ್ನು ಒದಗಿಸಲು 2021-22ನೇ ಸಾಲಿನಲ್ಲಿ ಈ ಕೆಳಕಂಡಂತೆ ಅನುದಾನ ಒದಗಿಸಲಾಗಿರುತ್ತದೆ. |

ರೂ.ಲಕ್ಷಗಳಲ್ಲಿ

| ಕ್ರ ಸಂ | ಕಾರ್ಯಕ್ರಮ | ಲೆಕ್ಕ ಶೀರ್ಷಿಕೆ | ನಿಗದಿಯಾಗಿರುವ ಅನುದಾನ | ಬಿಡುಗಡೆ |
|---|---|---|---|---|
| 1 | ಪ್ರಾಥಮಿಕ ಶಾಲೆಗಳ ನಿರ್ವಹಣೆ | 2202-01-053-0-01-200 | 1603.00 | 1172.00 |
| 2 | ಪ್ರೌಢ ಶಾಲೆಗಳ ನಿರ್ವಹಣೆ | 2202-02-053-0-01-059-422/423 | 2000.00 | 0.00 |
| 3 | ಪ್ರಾಥಮಿಕ ಶಾಲಾ ಮೂಲಭೂತ ಸೌಲಭ್ಯ | 4202-01-201-1-04-059/422/423/386 | 35273.00 | 28246.64 |
| 4 | ಪ್ರೌಢ ಶಾಲಾ ಮೂಲಭೂತ ಸೌಲಭ್ಯ | 4202-01-202-1-05-133/386 | 10000.00 | 1000.00 |
| 5 | ಅನುಸೂಚಿತ ಜಾತಿಗಳ ಉಪಯೋಜನೆ ಮತ್ತು ಬುಡಕಟ್ಟು ಉಪಯೋಜನೆ ಕಾಯ್ದೆಯಡಿ ಬಳಕೆಯಾಗದೆ ಇರುವ ಮೊತ್ತ – ಶಾಲೆಗಳ | 2202-02-001-0-09-422/423 | 242.67 | 200.00 |

| | | | | |
|---|---|---|---|---|
| | ದುರಸ್ಥಿಗಾಗಿ ಬಿಡುಗಡೆ | | | |
| 6 | ಶೌಚಾಲಯ ದುರಸ್ಥಿ ಮತ್ತು ನಿರ್ವಹಣೆ | 4202–01–201–1–07–200 | 5000.00 | 2625.00 |
| ಒಟ್ಟು | | | **54118.67** | **33243.64** |

ನವೆಂಬರ್–2021ರವರೆಗೂ ಜಿಲ್ಲಾವಾರು ಬಿಡುಗಡೆ ಮಾಡಲಾದ ಅನುದಾನದ ವಿವರವನ್ನು **ಅನುಬಂಧದಲ್ಲಿ** ಒದಗಿಸಿದೆ.

ಇದಲ್ಲದೆ ಸಮಗ್ರ ಶಿಕ್ಷಣ–ಕರ್ನಾಟಕ ದಡಿ 2021–22ನೇ ಸಾಲಿನ ಆಯವ್ಯಯ ಘೋಷಣೆಯಂತೆ 50 ಕರ್ನಾಟಕ ಪಬ್ಲಿಕ್ ಶಾಲೆಗಳಿಗೆ ತಲಾ ರೂ.2.00 ಕೋಟಿಯಂತೆ ಮೂಲಭೂತ ಸೌಕರ್ಯ ಒದಗಿಸಲು ಒಟ್ಟು ರೂ.100.00ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ.

**ಇಪಿ: 296 ಯೋಸಕ 2021**

(ಬಿ.ಸಿ.ನಾಗೇಶ್)
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

ಅನುಬಂಧ-1

| Sl. No | DISTRICTS | ಅನುಬಂಧ<br>Primary School Repairs 2202-01-053-0-01-200 | 155 MLA Constancies for repairs | 2 Years package (PRIMARY SCHOOL) | Jnanapeeta awardees school | 2 Years package (HIGH SCHOOL) | RIDF | Amrutha Shala (Rs.10Lakhs/School) | ರೂ.ಲಕ್ಷಗಳಲ್ಲಿ<br>Maintenance and Repair of Toilets | Total |
|---|---|---|---|---|---|---|---|---|---|---|
| | | 2202-01-053-0-01-200 | 2202-01-053-0-01-200, 2202-02-001-0-09-422/423 | 4202-01-201-1-04-059/422/423 | 4202-01-201-1-04-059 | 4202-01-202-1-05-386 | 4202-01-201-1-04-436 | 4202-01-201-1-04-059 | 4202-01-201-1-07-200 | |
| 1 | ಬೆಂಗಳೂರು ಉತ್ತರ | 0.00 | 0.00 | 0.00 | 0.00 | 0.00 | 0.00 | 60.00 | 30.82 | **90.82** |
| 2 | ಬೆಂಗಳೂರು ದಕ್ಷಿಣ | 3.00 | 0.00 | 0.00 | 0.00 | 0.00 | 0.00 | 90.00 | 50.29 | **143.29** |
| 3 | ಬೆಂಗಳೂರು ಗ್ರಾಮಾಂತರ | 0.00 | 20.00 | 28.57 | 0.00 | 0.00 | 77.15 | 130.00 | 51.86 | **307.58** |
| 4 | ರಾಮನಗರ | 0.00 | 20.00 | 0.00 | 0.00 | 0.00 | 0.00 | 150.00 | 68.17 | **238.17** |
| 5 | ಕೋಲಾರ | 0.00 | 30.00 | 0.00 | 20.96 | 0.00 | 0.00 | 210.00 | 91.50 | **352.46** |
| 6 | ಚಿಕ್ಕಬಳ್ಳಾಪುರ | 42.00 | 25.00 | 73.62 | 0.00 | 71.66 | 92.49 | 220.00 | 75.56 | **600.33** |
| 7 | ತುಮಕೂರು | 183.50 | 35.00 | 0.00 | 0.00 | 98.79 | 814.95 | 250.00 | 100.10 | **1482.34** |
| 8 | ಮಧುಗಿರಿ | 0.00 | 20.00 | 44.46 | 0.00 | 44.10 | 116.60 | 140.00 | 65.72 | **430.88** |
| 9 | ಶಿವಮೊಗ್ಗ | 0.00 | 35.00 | 0.00 | 76.82 | 0.00 | 278.58 | 270.00 | 102.39 | **762.79** |
| 10 | ಚಿತ್ರದುರ್ಗ | 118.00 | 30.00 | 108.07 | 0.00 | 88.20 | 833.63 | 190.00 | 82.98 | **1450.88** |
| 11 | ದಾವಣಗೆರೆ | 28.00 | 35.00 | 245.87 | 0.00 | 159.86 | 151.64 | 220.00 | 69.23 | **909.60** |
| 12 | ಮೈಸೂರು | 15.00 | 55.00 | 102.77 | 0.00 | 0.00 | 1910.37 | 350.00 | 121.14 | **2554.28** |
| 13 | ಚಾಮರಾಜನಗರ | 0.00 | 20.00 | 0.00 | 0.00 | 0.00 | 280.73 | 170.00 | 46.33 | **517.06** |
| 14 | ಮಂಡ್ಯ | 122.50 | 35.00 | 0.00 | 0.00 | 0.00 | 185.33 | 230.00 | 106.78 | **679.61** |
| 15 | ಹಾಸನ | 0.00 | 35.00 | 97.22 | 0.00 | 0.00 | 211.04 | 270.00 | 134.18 | **747.44** |
| 16 | ಚಿಕ್ಕಮಗಳೂರು | 3.00 | 25.00 | 0.00 | 0.00 | 0.00 | 382.95 | 280.00 | 73.39 | **764.34** |
| 17 | ಕೊಡಗು | 0.00 | 10.00 | 0.00 | 0.00 | 0.00 | 0.00 | 160.00 | 24.33 | **194.33** |
| 18 | ದಕ್ಷಿಣ ಕನ್ನಡ | 0.00 | 40.00 | 70.97 | 0.00 | 0.00 | 0.00 | 270.00 | 72.80 | **453.77** |
| 19 | ಉಡುಪಿ | 12.00 | 25.00 | 0.00 | 39.38 | 0.00 | 85.33 | 150.00 | 46.15 | **357.86** |
| 20 | ಬೆಳಗಾವಿ | 0.00 | 40.00 | 0.00 | 0.00 | 0.00 | 1622.05 | 220.00 | 78.83 | **1960.88** |
| 21 | ಚಿಕ್ಕೋಡಿ | 3.00 | 50.00 | 99.59 | 45.00 | 165.38 | 3097.86 | 240.00 | 105.24 | **3806.07** |
| 22 | ಬಿಜಾಪುರ | 0.00 | 40.00 | 88.20 | 0.00 | 115.67 | 231.49 | 360.00 | 100.10 | **935.46** |
| 23 | ಬಾಗಲಕೋಟೆ | 3.00 | 35.00 | 57.72 | 0.00 | 91.14 | 685.64 | 270.00 | 89.94 | **1232.44** |
| 24 | ಧಾರವಾಡ | 0.00 | 35.00 | 73.62 | 220.99 | 33.07 | 1324.12 | 160.00 | 52.47 | **1899.27** |
| 25 | ಗದಗ | 4.00 | 20.00 | 0.00 | 0.00 | 0.00 | 953.98 | 210.00 | 48.77 | **1236.75** |
| 26 | ಹಾವೇರಿ | 0.00 | 30.00 | 92.17 | 112.86 | 44.10 | 752.33 | 220.00 | 73.90 | **1325.36** |
| 27 | ಉತ್ತರ ಕನ್ನಡ | 0.00 | 15.00 | 60.36 | 0.00 | 0.00 | 127.12 | 180.00 | 43.40 | **425.88** |
| 28 | ಶಿರಸಿ | 0.00 | 15.00 | 97.02 | 117.13 | 27.39 | 121.56 | 220.00 | 55.70 | **653.80** |

| Sl No | DISTRICTS | Primary School Repairs 2202-01-053-0-01-200 | 155 MLA Constancies for repairs | 2 Years package (PRIMARY SCHOOL) | Jnanapeeta awardees school | 2 Years package (HIGH SCHOOL) | RIDF | Amrutha Shala (Rs.10Lakhs/School) | Maintenance and Repair of Toilets | Total |
|---|---|---|---|---|---|---|---|---|---|---|
| | | 2202-01-053-0-01-200 | 2202-01-053-0-01-200, 2202-02-001-0-09-422/423 | 4202-01-201-1-04-059/422/423 | 4202-01-201-1-04-059 | 4202-01-202-1-05-386 | 4202-01-201-1-04-436 | 4202-01-201-1-04-059 | 4202-01-201-1-07-200 | |
| 29 | ಗುಲ್ಬರ್ಗಾ | 0.00 | 0.00 | 0.00 | 0.00 | 0.00 | 1796.64 | 380.00 | 132.38 | **2309.02** |
| 30 | ಯಾದಗಿರಿ | 0.00 | 0.00 | 23.27 | 0.00 | 60.64 | 0.00 | 180.00 | 61.48 | **325.39** |
| 31 | ಬಳ್ಳಾರಿ | 60.00 | 0.00 | 0.00 | 0.00 | 0.00 | 1248.12 | 290.00 | 111.17 | **1709.29** |
| 32 | ರಾಯಚೂರು | 0.00 | 0.00 | 0.00 | 0.00 | 0.00 | 1226.71 | 260.00 | 102.40 | **1589.11** |
| 33 | ಕೊಪ್ಪಳ | 0.00 | 0.00 | 0.00 | 0.00 | 0.00 | 95.84 | 230.00 | 72.50 | **398.34** |
| 34 | ಬೀದರ್ | 0.00 | 0.00 | 0.00 | 0.00 | 0.00 | 45.75 | 270.00 | 83.00 | **398.75** |
| | ಒಟ್ಟು | **597.00** | **775.00** | **1363.50** | **633.14** | **1000.00** | **18750.00** | **7500.00** | 2625.00 | **33243.64** |

ಸಹನಿರ್ದೇಶಕರು(ಶಾಲಾ ಶಿಕ್ಷಣ)

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **675**

ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಖಾದರ್ ಯು.ಟಿ (ಮಂಗಳೂರು)

ಉತ್ತರಿಸಬೇಕಾದ ದಿನಾಂಕ : 16.12.2021

ಉತ್ತರಿಸುವ ಸಚಿವರು : ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಹಾಗೂ ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಆದ್ಯತಾ ಕುಟುಂಬಗಳಿಗೆ ಪಡಿತರ ಚೀಟಿ ನೀಡದಿರುವುದರಿಂದ ಬಡಕುಟುಂಬಗಳು ಆಹಾರಧಾನ್ಯ ಹಾಗೂ ಸಕಾಲದಲ್ಲಿ ಉಚಿತ ವೈದ್ಯಕೀಯ ಚಿಕಿತ್ಸೆ ಸಿಗದೆ ಸಮಸ್ಯೆ ಎದುರಿಸುತ್ತಿರುವ ವಿಚಾರ ಸರ್ಕಾರದ ಗಮನದಲ್ಲಿದೆಯೇ; | ಹೌದು.<br>ಹೊಸ ಪಡಿತರ ಚೀಟಿಗಾಗಿ ಅರ್ಜಿ ಸಲ್ಲಿಸಲು ಆನ್‌ಲೈನ್ ವ್ಯವಸ್ಥೆ ಜಾರಿಯಲ್ಲಿದೆ. ವೈದ್ಯಕೀಯ ತುರ್ತು ಚಿಕಿತ್ಸೆಗಾಗಿ ಅರ್ಜಿ ಸಲ್ಲಿಸಿರುವವರ ಅರ್ಹ ಫಲಾನುಭವಿಗಳಿಗೆ (ಫಿಫೊ) ಹೊರತುಪಡಿಸಿ ಪಡಿತರ ಚೀಟಿ ಅನುಮೋದಿಸಿ ವಿತರಿಸುವ ಅವಕಾಶವನ್ನು ಕಲ್ಪಿಸಲಾಗಿದೆ. |
| ಆ | ಅರ್ಜಿ ಸಲ್ಲಿಸಿದವರಲ್ಲಿ ಅರ್ಹ ಆದ್ಯತಾ ಕುಟುಂಬಗಳನ್ನು ಗುರುತಿಸಿ ಅವರಿಗೆ ಪಡಿತರ ಚೀಟಿ ವಿತರಿಸದಿರಲು ಕಾರಣವೇನು? | ಕೋವಿಡ್-19 ಲಾಕ್‌ಡೌನ್ ಅವಧಿಯಲ್ಲಿ ಹೊಸ ಪಡಿತರ ಚೀಟಿ ಕೋರಿ ಸಲ್ಲಿಸಿರುವ ಅರ್ಜಿಗಳ ಸ್ಥಳ ಪರಿಶೀಲನೆ ಕಾರ್ಯವು ನಿಧಾನವಾಗಿದ್ದು ಮತ್ತು ಈ ಅವಧಿಯಲ್ಲಿ ಬಯೋಮೆಟ್ರಿಕ್ ಬಳಕೆಯನ್ನು ಹಿಂಪಡೆದಿರುವ ಕಾರಣ ಪಡಿತರ ಚೀಟಿಗಳನ್ನು ವಿತರಿಸುವ ಕಾರ್ಯವನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿತ್ತು. ಪ್ರಸ್ತುತ ಅರ್ಹ ಅರ್ಜಿದಾರರಿಗೆ ಪಡಿತರ ಚೀಟಿಯನ್ನು ನೀಡಲು ಆದೇಶಿಸಿದ್ದು, ಪ್ರಕ್ರಿಯೆ ಜಾರಿಯಲ್ಲಿದೆ. |

ಆನಾಸ 299 ಡಿಆರ್ ಎ 2021 (ಇ-ಆಫೀಸ್)

(ಉಮೇಶ್. ವಿ. ಕತ್ತಿ)
ಅರಣ್ಯ ಮತ್ತು ಆಹಾರ, ನಾಗರಿಕ ಸರಬರಾಜು ಮತ್ತು
ಗ್ರಾಹಕರ ವ್ಯವಹಾರಗಳ ಹಾಗೂ
ಕಾನೂನು ಮಾಪನಶಾಸ್ತ್ರ ಇಲಾಖಾ ಸಚಿವರು.

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 676
ಸದಸ್ಯರ ಹೆಸರು : ಶ್ರೀ ಖಾದರ್ .ಯು.ಟಿ (ಮಂಗಳೂರು)
ಉತ್ತರಿಸಬೇಕಾದ ದಿನಾಂಕ : 16-12-2021.
ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯ ಆಯ್ಕೆಗೆ ಇರುವ ಮಾನದಂಡವೇನು; ಕರಾವಳಿಯ ಯಕ್ಷಗಾನ ಹಾಗೂ ಭರತನಾಟ್ಯ ಕಲಾವಿದರಲ್ಲಿ ಯಾರೊಬ್ಬರೂ ಈ ಪ್ರಶಸ್ತಿಗೆ ಆಯ್ಕೆ ಮಾಡದಿರಲು ಕಾರಣವೇನು; | ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗೆ ಆಯ್ಕೆ ಮಾಡಲು ಇರುವ ಮಾನದಂಡಗಳ ಸರ್ಕಾರದ ಮಾರ್ಗಸೂಚಿಯನ್ನು ಅನುಬಂಧದಲ್ಲಿ ಇರಿಸಿದೆ.<br>ರಾಜ್ಯೋತ್ಸವ ಪ್ರಶಸ್ತಿ ಆಯ್ಕೆ ಸಲಹಾ ಸಮಿತಿ ಹಾಗೂ ಆಯ್ಕೆ ಸಮಿತಿಯು ಕ್ಷೇತ್ರವಾರು ಪರಿಶೀಲಿಸಿ, ರಾಜ್ಯೋತ್ಸವ ಪ್ರಶಸ್ತಿಗೆ ಪುರಸ್ಕೃತರನ್ನು ಆಯ್ಕೆ ಮಾಡಲಾಗಿರುತ್ತದೆ. |
| ಆ) | ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ಪ್ರತೀ ವರ್ಷ ಸಂಘ-ಸಂಸ್ಥೆಗಳಿಗೆ ಕಲಾ ಕಾರ್ಯಕ್ರಮಗಳಿಗೆ ಸಹಾಯಧನ ನೀಡುತ್ತಿದ್ದು, ಈ ವರ್ಷ ಇಂತಹ ಕಾರ್ಯಕ್ರಮಗಳನ್ನು ನಡೆಸಲು ಎಷ್ಟು ಅನುದಾನ ಬಿಡುಗಡೆ ಮಾಡಲಾಗಿದೆ; | 2021-22ನೇ ಸಾಲಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲು ಸಂಘ-ಸಂಸ್ಥೆಗಳಿಗೆ ಅನುದಾನ ಮಂಜೂರಾಗಿ ಪಾವತಿಯಾಗದ ಪ್ರಕರಣಗಳಿಗೆ ನವೀಕರಣ ಆದೇಶದಂತೆ ರೂ.67.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ. |
| ಇ) | ಬಿಡುಗಡೆ ಮಾಡದಿದ್ದಲ್ಲಿ, ಯಾವಾಗ ಬಿಡುಗಡೆ ಮಾಡಲಾಗುವುದು? (ಮಾಹಿತಿ ನೀಡುವುದು) | ಅನ್ವಯಿಸುವುದಿಲ್ಲ |

ಸಂಖ್ಯೆ: ಕಸಂವಾ 79 ಕವಿಸ 2021

(ವಿ. ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು



# ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ
## 11 ನೇ ಅಧಿವೇಶನ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **677** |
| 2. ಮಾನ್ಯ ಸದಸ್ಯರ ಹೆಸರು | **ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)** |
| 3. ಉತ್ತರಿಸುವ ಸಚಿವರು | **ಮಾನ್ಯ ಉನ್ನತ ಶಿಕ್ಷಣ ಸಚಿವರು** |
| 4. ಉತ್ತರಿಸಬೇಕಾದ ದಿನಾಂಕ | **16.12.2021** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಡಾ: ಬಿ.ಆರ್. ಅಂಬೇಡ್ಕರ್ ಸ್ಕೂಲ್ ಆಫ್ ಎಕಾನಾಮಿಕ್ ಸಂಸ್ಥೆಯು ರಾಜ್ಯ ಸರ್ಕಾರದ ಸಂಸ್ಥೆಯೇ ಅಥವಾ ಕೇಂದ್ರ ಪ್ರಾಯೋಜಿತ ಸಂಸ್ಥೆಯೇ; ಈ ಕುರಿತು ಸೂಕ್ತ ಮಾಹಿತಿ ಒದಗಿಸುವುದು; | ಸ್ವಾಯತ್ತ ಶಿಕ್ಷಣ ಸಂಸ್ಥೆಯನ್ನಾಗಿ ರಾಜ್ಯ ಸರ್ಕಾರದಿಂದ ಆರಂಭಿಸಲಾದ ಡಾ: ಬಿ.ಆರ್. ಅಂಬೇಡ್ಕರ್ ಸ್ಕೂಲ್ ಆಫ್ ಎಕಾನಾಮಿಕ್ಸ್ ಅನ್ನು ಡಾ.ಬಿ.ಆರ್. ಅಂಬೇಡ್ಕರ್ ಅರ್ಥಶಾಸ್ತ್ರ ವಿದ್ಯಾಲಯ ವಿಶ್ವವಿದ್ಯಾಲಯ, ಅಧಿನಿಯಮ, 2018 (**2019ರ ಕರ್ನಾಟಕ ಅಧಿನಿಯಮ ಸಂಖ್ಯೆ:20**) ಜಾರಿಗೊಳಿಸುವ ಮೂಲಕ "ಡಾ.ಬಿ.ಆರ್. ಅಂಬೇಡ್ಕರ್ ಅರ್ಥಶಾಸ್ತ್ರ ವಿದ್ಯಾಲಯ ವಿಶ್ವವಿದ್ಯಾಲಯ" ಎಂಬ ಹೆಸರಿನಲ್ಲಿ ಏಕಾತ್ಮಕ ಸ್ವರೂಪದ ರಾಜ್ಯ ಸಾರ್ವಜನಿಕ ವಿಶ್ವವಿದ್ಯಾಲಯವನ್ನಾಗಿ ಉನ್ನತೀಕರಿಸಲಾಗಿದೆ. |
| ಆ) | ಡಾ: ಬಿ.ಆರ್. ಅಂಬೇಡ್ಕರ್ ಸ್ಕೂಲ್ ಆಫ್ ಎಕಾನಾಮಿಕ್ ಸಂಸ್ಥೆಯು ರಾಜ್ಯ ಸರ್ಕಾರದ ಸಂಸ್ಥೆಯಾಗಿದ್ದಲ್ಲಿ, ರಾಜ್ಯಕ್ಕೆ ಮೀಸಲಿಟ್ಟ ಸೀಟುಗಳ ಪ್ರವೇಶ ಪ್ರಕ್ರಿಯೆಯಲ್ಲಿ 371(ಜೆ) ಅಡಿಯಲ್ಲಿ ಮೀಸಲಾತಿ ನೀಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕರ್ನಾಟಕ ಶೈಕ್ಷಣಿಕ ಸಂಸ್ಥೆಗಳ(ಹೈದ್ರಾಬಾದ್-ಕರ್ನಾಟಕ ಪ್ರದೇಶದಲ್ಲಿ ಪ್ರವೇಶ ನಿಯಂತ್ರಣ) ಆದೇಶ, 2013 ರ ಕಂಡಿಕೆ 7(1) ಮತ್ತು ಎರಡನೇ ಅನುಸೂಚಿಯ ಭಾಗ-2ರ ಕ್ರಮಸಂಖ್ಯೆ:9 ರನ್ವಯ ರಾಜ್ಯವ್ಯಾಪಿ ಶಿಕ್ಷಣ ಸಂಸ್ಥೆಯೆಂದು ಪರಿಗಣಿತವಾಗುವ ಬೆಂಗಳೂರು ಡಾ.ಬಿ.ಆರ್. ಅಂಬೇಡ್ಕರ್ ಅರ್ಥಶಾಸ್ತ್ರ ವಿದ್ಯಾಲಯ |

--2

| | | |
|---|---|---|
| | | ವಿಶ್ವವಿದ್ಯಾಲಯದಲ್ಲಿ ರಾಜ್ಯದ ವಿದ್ಯಾರ್ಥಿಗಳ ಕೋಟಾದಡಿಯ ಸೀಟುಗಳ ಪೈಕಿ ಶೇ. 8 ರಷ್ಟು ಸೀಟುಗಳನ್ನು ಭಾರತ ಸಂವಿಧಾನದ ಅನುಚ್ಛೇದ 371(ಜೆ)ರನ್ವಯ ಕಲ್ಯಾಣ ಕರ್ನಾಟಕ ಪ್ರದೇಶದ ವಿದ್ಯಾರ್ಥಿಗಳಿಗೆ ಮೀಸಲಿಡಲಾಗುತ್ತಿದೆ. |
| ಇ) | ಬಂದಿದ್ದಲ್ಲಿ ಮೀಸಲಾತಿಯನ್ನು ನೀಡದೇ ಇರಲು ಕಾರಣಗಳೇನು; | ಉದ್ಭವಿಸುವುದಿಲ್ಲ |
| ಈ) | ಈ ಸಂಸ್ಥೆಯಲ್ಲಿ 371 (ಜೆ) ಅಡಿಯಲ್ಲಿ ಮೀಸಲಾತಿಯನ್ನು ನೀಡದೇ ಇರುವುದು ಆ ಭಾಗದ ಮಕ್ಕಳ ಮೂಲಭೂತ ಹಕ್ಕಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | |
| ಉ) | ಬಂದಿದ್ದಲ್ಲಿ ತೆಗೆದುಕೊಂಡ ಕ್ರಮವೇನು? | |

**ಸಂಖ್ಯೆ : ಇಡಿ / 364 / ಯುಬಿವಿ/2021**

**(ಡಾ|| ಅಶ್ವಥ್ ನಾರಾಯಣ ಸಿ.ಎನ್)**

ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,
ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು



# ಕರ್ನಾಟಕ ವಿಧಾನಸಭೆ
## 15ನೇ ವಿಧಾನಸಭೆ
## 11 ನೇ ಅಧಿವೇಶನ

| | |
|---|---|
| 1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | **678** |
| 2. ಮಾನ್ಯ ಸದಸ್ಯರ ಹೆಸರು | **ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ)** |
| 3. ಉತ್ತರಿಸುವ ಸಚಿವರು | ಮಾನ್ಯ ಉನ್ನತ ಶಿಕ್ಷಣ ಸಚಿವರು |
| 4. ಉತ್ತರಿಸಬೇಕಾದ ದಿನಾಂಕ | **16.12.2021** |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಡಾ. ಬಿ.ಆರ್. ಅಂಬೇಡ್ಕರ್ ಸ್ಕೂಲ್ ಆಫ್ ಎಕಾನಾಮಿಕ್ಸ್ ಸಂಸ್ಥೆಯಲ್ಲಿ ರಾಜ್ಯದ ನೀತಿಯಂತೆ ಹಿಂದುಳಿದ ವರ್ಗಗಳಿಗೆ (1ಎ,2ಎ,2ಬಿ,3ಎ,3ಬಿ) ಮೀಸಲಾತಿಯನ್ನು ನೀಡಲಾಗುತ್ತಿದೆಯೇ; | ರಾಜ್ಯ ಸರ್ಕಾರದ ಕಾರ್ಯನೀತಿಯನ್ವಯ ಸಾಮಾಜಿಕ ಮೀಸಲಾತಿಗನುಗುಣವಾಗಿ ಹಿಂದುಳಿದ ವರ್ಗಗಳ ವಿದ್ಯಾರ್ಥಿಗಳಿಗೆ ಡಾ.ಬಿ.ಆರ್.ಅಂಬೇಡ್ಕರ್ ಅರ್ಥಶಾಸ್ತ್ರ ವಿದ್ಯಾಲಯ ವಿಶ್ವವಿದ್ಯಾಲಯದ ಪ್ರವೇಶ ದಾಖಲಾತಿಯಲ್ಲಿ ಮೀಸಲಾತಿ ನೀಡಲಾಗುತ್ತಿದೆ. |
| ಆ) | ಸದರಿ ಸಂಸ್ಥೆಯಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಮೀಸಲಾತಿಯನ್ನು ನೀಡದೇ ಇರಲು ಕಾರಣಗಳೇನು; | |
| ಇ) | ಮೀಸಲಾತಿಯನ್ನು ನೀಡದೇ ಇರುವುದರಿಂದ ರಾಜ್ಯದಲ್ಲಿನ ಹಿಂದುಳಿದ ವರ್ಗಗಳ ಮಕ್ಕಳಿಗೆ ಅನ್ಯಾಯವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಏನು ಕ್ರಮ ವಹಿಸಲಾಗಿದೆ; | ಉದ್ಭವಿಸುವುದಿಲ್ಲ. |

| | | |
|---|---|---|
| ಈ) | ಸದರಿ ಸಂಸ್ಥೆಯಲ್ಲಿ ರಾಜ್ಯದ ಮೀಸಲಾತಿಯ ನಿಯಮ ಉಲ್ಲಂಘನೆಯಾಗಲು ಕಾರಣವೇನು; ಇದನ್ನು ಉಲ್ಲಂಘಿಸಿದವರ ಮೇಲೆ ಸರ್ಕಾರವು ಯಾವ ಶಿಸ್ತು ಕ್ರಮವನ್ನು ತೆಗೆದುಕೊಂಡಿದೆ; | ಮೀಸಲಾತಿ ನಿಯಮ ಉಲ್ಲಂಘನೆ ಮಾಡಿರುವುದಿಲ್ಲ |
| ಉ) | ಸದರಿ ಸಂಸ್ಥೆಯಲ್ಲಿ ಮೀಸಲಾತಿಯನ್ನು ಮೀಸಸರಿಪಡಿಸಲು ಯಾವ ರೀತಿಯ ಸುಧಾರಣಾ ಕ್ರಮಗಳನ್ನು ಸರ್ಕಾರವು ತೆಗೆದುಕೊಂಡಿದೆ? | ಮೀಸಲಾತಿ ನಿಯಮ ಪಾಲನೆಯಾಗುತ್ತಿದೆ |

ಇಡಿ / 367 / ಯುಬಿವಿ / 2021

**(ಡಾ|| ಅಶ್ವಥ್ ನಾರಾಯಣ ಸಿ.ಎನ್)**
ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ,
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಇಲಾಖೆ ಸಚಿವರು

# ಕರ್ನಾಟಕ ವಿಧಾನ ಸಭೆ

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 679 |
| ಮಾನ್ಯ ಸದಸ್ಯರ ಹೆಸರು | ಶ್ರೀ ಅಮರೇಗೌಡ ಲಿಂಗನಗೌಡ ಪಾಟೀಲ್ ಬಯ್ಯಾಪುರ್ (ಕುಷ್ಟಗಿ) |
| ಉತ್ತರಿಸುವ ಸಚಿವರು | ಉನ್ನತ ಶಿಕ್ಷಣ ಸಚಿವರು |
| ಉತ್ತರಿಸಬೇಕಾದ ದಿನಾಂಕ | 16.12.2021 |

| | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕದ ರಾಜ್ಯದಲ್ಲಿ ಸಂವಿಧಾನದ ಅನುಚ್ಛೇಧ 371 ಜೆ ಅನ್ವಯ ಕಲ್ಯಾಣ ಕರ್ನಾಟಕ ಪ್ರದೇಶದ ಹೊರಗಡೆ ಇರುವ ವಿಶ್ವವಿದ್ಯಾಲಯಗಳಲ್ಲಿ ಪಿ.ಹೆಚ್.ಡಿ ಪ್ರವೇಶ ಪ್ರಕ್ರಿಯೆಯಲ್ಲಿ ಶೇ.8% ಮೀಸಲಾತಿಯನ್ನು ಪಾಲನೆ ಮಾಡದೇ ಇರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಶಿಕ್ಷಣ ಇಲಾಖೆಯ ಸುತ್ತೋಲೆ ಸಂಖ್ಯೆ: ಇಡಿ 269 ಯುಎನ್ಇ 2014, ದಿನಾಂಕ:13.05.2014 ರಂದು ರಾಜ್ಯವಾರು ವಿಶ್ವವಿದ್ಯಾಲಯಗಳು ಪ್ರತಿಯೊಂದು ಅಧ್ಯಯನ ವ್ಯಾಸಂಗ ಕ್ರಮದಲ್ಲಿ ಲಭ್ಯವಿರುವ ಸ್ಥಾನಗಳಲ್ಲಿ ಶೇ.8% ರಷ್ಟು ಹೈದರಾಬಾದ್ ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಹಂಚಿಕೆ ಮಾಡುವುದು ಎಂದು ಸುತ್ತೋಲೆಯನ್ನು ಹೊರಡಿಸಲಾಗಿದೆ. ಸದರಿ ಸುತ್ತೋಲೆಯನ್ವಯ 371 ಜೆ ನಿಯಮದಂತೆ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಪಿ.ಹೆಚ್.ಡಿ. ಪ್ರವೇಶ ಪ್ರಕ್ರಿಯೆಯಲ್ಲಿ ಶೇ.8% ಮೀಸಲಾತಿಯನ್ನು ಪಾಲನೆ ಮಾಡಲಾಗುತ್ತಿದೆ. |
| (ಆ) | ಬಂದಿದ್ದಲ್ಲಿ, ಯಾವ ಕ್ರಮಗಳನ್ನು ತೆಗೆದುಕೊಳ್ಳಲಾಗಿದೆ; | |
| (ಇ) | 371 ಜೆ ನಿಯಮದಂತೆ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಪಿ.ಹೆಚ್.ಡಿ. ಪ್ರವೇಶ ಪ್ರಕ್ರಿಯೆಯಲ್ಲಿ ಶೇ.8% ಮೀಸಲಾತಿಯನ್ನು ನೀಡಲು ಸರ್ಕಾರಕ್ಕೆ ಇರುವ ತೊಂದರೆಗಳೇನು; | |
| (ಈ) | ಸದರಿ ನಿಯಮಗಳನ್ನು ಉಲ್ಲಂಘಿಸಿದ ಅಧಿಕಾರಿಗಳ ಮೇಲೆ ಸರ್ಕಾರವು ತೆಗೆದುಕೊಳ್ಳಲಿರುವ ಶಿಸ್ತು ಕ್ರಮಗಳೇನು? | |

ಸಂಖ್ಯೆ: ಇಡಿ 341 ಯುಎನ್ಇ 2021

(ಡಾ: ಅಶ್ವಥ್ ನಾರಾಯಣ ಸಿ.ಎನ್.)
ಉನ್ನತ ಶಿಕ್ಷಣ, ಐಟಿ ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು
ಜೀವನೋಪಾಯ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 680 |
| ಸದಸ್ಯರ ಹೆಸರು | : | ಶ್ರೀ ಕೃಷ್ಣಾರೆಡ್ಡಿ. ಎಂ (ಚಿಂತಾಮಣಿ) |
| ಉತ್ತರಿಸಬೇಕಾದ ದಿನಾಂಕ | : | 16.12.2021 |
| ಉತ್ತರಿಸುವ ಸಚಿವರು | : | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು |

| ಕ್ರಸ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಂತಾಮಣಿ ತಾಲ್ಲೂಕಿನ ವ್ಯಾಪ್ತಿಯಲ್ಲಿರುವ ಸರ್ಕಾರಿ ಶಾಲೆಗಳ ಕೊಠಡಿಗಳು ಹೆಚ್ಚಿನ ಸಂಖ್ಯೆಯಲ್ಲಿ ಶಿಥಿಲಗೊಂಡಿರುವುದು ವಿದ್ಯಾರ್ಥಿಗಳು ಭಯದ ವಾತಾವರಣದಲ್ಲಿ ಪಾಠ ಪ್ರವಚನಗಳನ್ನು ಕೇಳುವಂತಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ | ಬಂದಿದೆ. |
| ಆ) | ಬಂದಿದ್ದಲ್ಲಿ ಶಿಥಿಲಗೊಂಡಿರುವ ಶಾಲಾ ಕೊಠಡಿಗಳನ್ನು ದುರಸ್ತಿ ಮಾಡಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; ಇದ್ದಲ್ಲಿ ಯಾವ ಕಾಲಮಿತಿಯೊಳಗೆ ಅಗತ್ಯ ಅನುದಾನವನ್ನು ಬಿಡುಗಡೆ ಮಾಡಿ ದುರಸ್ತಿ ಕಾರ್ಯವನ್ನು ಕೈಗೊಳ್ಳಲಾಗುವುದು. | ಹೌದು.<br>• 2021-22ನೇ ಸಾಲಿನ ರಾಜ್ಯ ಬಂಡವಾಳ ಯೋಜನೆಯಡಿ ಚಿಂತಾಮಣಿ ವಿಧಾನಸಭಾ ಕ್ಷೇತ್ರದ ತುರ್ತು ದುರಸ್ತಿ ಕಾಮಗಾರಿಗಳಿಗಾಗಿ 3 ಶಾಲೆಗಳಿಗೆ ರೂ.9.00 ಲಕ್ಷಗಳನ್ನು ಒದಗಿಸಲಾಗಿದೆ.<br>• 2021-22ನೇ ಸಾಲಿನ ಅಮೃತ ಶಾಲಾ ಸೌಲಭ್ಯ ಯೋಜನೆಯಡಿ ಚಿಂತಾಮಣಿ ವಿಧಾನಸಭಾ ಕ್ಷೇತ್ರದ 4 ಸರ್ಕಾರಿ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ತಲಾ 10.00 ಲಕ್ಷಗಳಂತೆ ರೂ.40.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br>• 2021-22ನೇ ಸಾಲಿನ ರಾಜ್ಯ ಸರ್ಕಾರದ ಬಂಡವಾಳ ವೆಚ್ಚ ಯೋಜನೆಯಡಿ ಚಿಂತಾಮಣಿ ವಿಧಾನಸಭಾ ಕ್ಷೇತ್ರದ ಸರ್ಕಾರಿ ಶಾಲಾ ಕಟ್ಟಡಗಳ ದುರಸ್ಥಿಗೆ ರೂ.6.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಅನುದಾನವನ್ನು ಗರಿಷ್ಠ |

ಶಾಲೆಗಳಲ್ಲಿ ದುರಸ್ಥಿ ಕಾರ್ಯ ವಿಸ್ತರಿಸಲು ಸ್ಥಳೀಯವಾಗಿ ಜಾರಿಯಲ್ಲಿರುವ ವಿವಿಧ ಅಭಿವೃದ್ಧಿ ಯೋಜನೆಗಳ ಅನುದಾನವನ್ನು ಒಗ್ಗೂಡಿಸುವಿಕೆ (convergence) ಮೂಲಕ ಅನುಷ್ಠಾನಕ್ಕಾಗಿ ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯನುಷ್ಠಾನ ಸಮಿತಿಯನ್ನು ರಚಿಸಿ ಶೀಘ್ರವಾಗಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.

- ಕಳೆದ 03 ವರ್ಷದಲ್ಲಿ ವಿವಿಧ ಯೋಜನೆಯಡಿ ಚಿಂತಾಮಣಿ ವಿಧಾನ ಸಭಾ ಕ್ಷೇತ್ರದಲ್ಲಿ ಶಿಥಿಲವಾಗಿರುವ ಶಾಲೆಗಳ ದುರಸ್ಥಿ/ಮರು ನಿರ್ಮಾಣಕ್ಕಾಗಿ ಒಟ್ಟು **ರೂ.291.24ಲಕ್ಷಗಳ** ಅನುದಾನವನ್ನು ಒದಗಿಸಲಾಗಿದೆ. ವಿವರಗಳು ಕೆಳಕಂಡಂತಿವೆ.

| **ಕ್ರ ಸಂ** | **ವರ್ಷ** | **ಕಾಮಗಾರಿಗಳ ವಿವರ** | **ಕೊಠಡಿ ಸಂಖ್ಯೆ** | **ಮಂಜೂರಾದ ಅನುದಾನ (ಲಕ್ಷಗಳಲ್ಲಿ)** |
|---|---|---|---|---|
| 01 | 2018-19 | ಹೊಸ ಕೊಠಡಿಗಳ ಕಾಮಗಾರಿಗಳು | 7 | 79.05 |
| | | ದುರಸ್ಥಿ ಕಾಮಗಾರಿಗಳು | 13 | 18.25 |
| | | ಒಟ್ಟು | 20 | 97.30 |
| 02 | 2019-20 | ಮರುನಿರ್ಮಾಣ ಕಾಮಗಾರಿಗಳು | 8 | 88.00 |
| | | ದುರಸ್ಥಿ ಕಾಮಗಾರಿಗಳು | 13 | 6.94 |
| | | **ಒಟ್ಟು** | **21** | **94.94** |
| 03 | 2020-21 | ಹೊಸ ಕೊಠಡಿಗಳ ಕಾಮಗಾರಿಗಳು | 2 | 21.20 |
| | | ಮರುನಿರ್ಮಾಣ ಕಾಮಗಾರಿಗಳು | 3 | 31.80 |
| | | **ಒಟ್ಟು** | **5** | **53.00** |

- 2021-22ನೇ ಸಾಲಿನಲ್ಲಿ ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ

| | | |
|---|---|---|
| | | ಆದ್ಯತೆ ಮೇರೆಗೆ ಚಿಂತಾಮಣಿ ವಿಧಾನಸಭಾ ಕ್ಷೇತ್ರವನ್ನೊಳಗೊಂಡಂತೆ ಹಂತಹಂತವಾಗಿ ರಾಜ್ಯದಾದ್ಯಂತ ಸರ್ಕಾರಿ ಶಾಲಾ ಕೊಠಡಿ ದುರಸ್ಥಿ ಕಾರ್ಯಕೈಗೊಳ್ಳಲು ಕ್ರಮವಹಿಸಲಾಗುತ್ತಿದೆ. |

**ಇಪಿ: 282 ಯೋಸಕ 2021**

(ಬಿ.ಸಿ. ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 681
ಮಾನ್ಯ ಸದಸ್ಯರ ಹೆಸರು : ಶ್ರೀ ಕೃಷ್ಣಾರೆಡ್ಡಿ ಎಂ (ಚಿಂತಾಮಣಿ)
ಉತ್ತರಿಸಬೇಕಾದ ದಿನಾಂಕ : 16-12-2021
ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ತಾಲ್ಲೂಕಿನ ಕೈವಾರ ಹೋಬಳಿಯ ಹಿರೇಕಟ್ಟಿಗೇನಹಳ್ಳಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಹಾಗೂ ಮುಂಗಾನಹಳ್ಳಿ ಹೋಬಳಿಯ ಕಡದಲಮರಿ ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳು ಇಲ್ಲದೇ ಇರುವುದರಿಂದ ಈ ಭಾಗದ ಸುತ್ತಮುತ್ತಲಿನ ಜನರು ಅನಾರೋಗ್ಯಕ್ಕೆ ತುತ್ತಾದಲ್ಲಿ, ಚಿಕಿತ್ಸೆ ಪಡೆಯಲು ತೀರಾ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | 2011ರ ಜನಸಂಖ್ಯೆ ಅನ್ವಯ, ಚಿಂತಾಮಣಿ ತಾಲ್ಲೂಕಿನ ಗ್ರಾಮೀಣ ಜನಸಂಖ್ಯೆ:-2,22,002 ಇದ್ದು, ಮಾರ್ಗಸೂಚಿಯನ್ವಯ 7 ಪ್ರಾಥಮಿಕ ಆರೋಗ್ಯ ಕೇಂದ್ರ ಸ್ಥಾಪಿಸಲು ಅವಕಾಶವಿದ್ದು, ಪ್ರಸ್ತುತ 10 ಪ್ರಾಥಮಿಕ ಆರೋಗ್ಯ ಕೇಂದ್ರ ಕಾರ್ಯನಿರ್ವಹಿಸುತ್ತಿವೆ. |
| ಆ | ಬಂದಿದ್ದಲ್ಲಿ, ಈ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಎಷ್ಟು ಕಾಲಮಿತಿಯೊಳಗೆ ಮಂಜೂರು ಮಾಡಲಾಗುವುದು? (ವಿವರ ನೀಡುವುದು) | ಚಿಂತಾಮಣಿ ತಾಲ್ಲೂಕಿನಲ್ಲಿ ಈಗಾಗಲೇ ಹೆಚ್ಚುವರಿಯಾಗಿ 3 ಪ್ರಾಥಮಿಕ ಆರೋಗ್ಯ ಕೇಂದ್ರ ಕಾರ್ಯ ನಿರ್ವಹಿಸುತ್ತಿರುವುದರಿಂದ ಈ ಗ್ರಾಮ ಪಂಚಾಯಿತಿಗಳ ವ್ಯಾಪ್ತಿಯಲ್ಲಿ ಸರ್ಕಾರಿ ಪ್ರಾಥಮಿಕ ಆರೋಗ್ಯ ಕೇಂದ್ರಗಳನ್ನು ಮಂಜೂರು ಮಾಡಲು ಸಾಧ್ಯವಾಗುವುದಿಲ್ಲ. |

ಸಂಖ್ಯೆ: ಆಕುಕ 681 ಚುರಪ್ರ 2021

(ಡಾ: ಕೆ. ಸುಧಾಕರ್)
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ
ವೈದ್ಯಕೀಯ ಶಿಕ್ಷಣ ಸಚಿವರು

# ಕರ್ನಾಟಕ ವಿಧಾನಸಭೆ

| | | |
|---|---|---|
| 1) | ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 682 |
| 2) | ಮಾನ್ಯ ಸದಸ್ಯರ ಹೆಸರು | ಶ್ರೀ ನಂಜೇಗೌಡ ಕೆ.ವೈ (ಮಾಲೂರು) |
| 3) | ಉತ್ತರಿಸಬೇಕಾದ ದಿನಾಂಕ | 16/12/2021 |
| 4) | ಉತ್ತರಿಸುವವರು | ಮಾನ್ಯ ಉನ್ನತ ಶಿಕ್ಷಣ, ಐಟಿ-ಬಿಟಿ ವಿಜ್ಞಾನ ಮತ್ತು ತಂತ್ರಜ್ಞಾನ, ವಿದ್ಯುನ್ಮಾನ ಮತ್ತು ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಹಾಗೂ ಜೀವನೋಪಾಯ ಸಚಿವರು. |

************

| ಕ್ರ ಸಂ | ಪ್ರಶ್ನೆ | ಉತ್ತರ | Reply |
|---|---|---|---|
| ಅ) | ಕೋಲಾರ ಜಿಲ್ಲೆ ಮಾಲೂರು ತಾಲ್ಲೂಕಿನಲ್ಲಿರುವ ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಗೆ ಸ್ವಂತ ಕಟ್ಟಡ ಮತ್ತು ಮೂಲಭೂತ ಸೌಕರ್ಯಗಳ ಕೊರತೆಯಿಂದ ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ಕೆ ತೀವ್ರ ಅಡಚಣೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಮಾಲೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯು ಬಾಡಿಗೆ ಕಟ್ಟಡದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ತರಬೇತಿಗೆ ಯಾವುದೇ ಅಡಚಣೆ ಇರುವುದಿಲ್ಲ. | The Government Industrial Training Institute of Malur is working in a rented building and there is no obstacle for training. |
| ಆ) | ಸದರಿ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣಕ್ಕೆ ಸರ್ಕಾರ ಅನುದಾನ ಮಂಜೂರು ಮಾಡಿದೆಯೇ; ಎಷ್ಟು ಅನುದಾನ ಮಂಜೂರು ಮಾಡಲಾಗಿದೆ; (ವಿವರ ಒದಗಿಸುವುದು) | ಹೌದು. ಮಾಲೂರು ಸರ್ಕಾರಿ ಕೈಗಾರಿಕಾ ತರಬೇತಿ ಸಂಸ್ಥೆಯ ಕಟ್ಟಡ ನಿರ್ಮಾಣವನ್ನು ಅಂದಾಜು ರೂ. 230.00 ಲಕ್ಷಗಳ ಅನುದಾನದಲ್ಲಿ ಕೈಗೊಳ್ಳಲು 2021-22ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಅನುಮೋದನೆ ನೀಡಲಾಗಿದೆ. ಹಾಗೂ 2021-22ನೇ ಸಾಲಿಗೆ ರೂ. 74.89 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. | Yes. Construction of building for Government Industrial Training Institute, Malur, at an estimated cost of Rs. 230 Lakhs have been approved as per the action plan for the year 2021-22. Rs. 74.89 lakhs have been provided for the year 2021-22. |
| ಇ) | ಸದರಿ ಕಟ್ಟಡ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು ಹಾಗೂ ಯಾವ ಕಾಲಮಿತಿಯಲ್ಲಿ ಪೂರ್ಣಗೊಳಿಸಲಾಗುವುದು; (ವಿವರ ಒದಗಿಸುವುದು) | ಕಟ್ಟಡ ಕಾಮಗಾರಿಯನ್ನು ಸೂಕ್ತ ಸರ್ಕಾರಿ ಸ್ವಾಮ್ಯದ ನಿರ್ಮಾಣ ಏಜೆನ್ಸಿಗೆ ವಹಿಸಲು ಕ್ರಮವಹಿಸಲಾಗುತ್ತಿದ್ದು, ಅನುದಾನ ಲಭ್ಯತೆಯ ಅನುಸಾರ 2 ರಿಂದ 3 ವರ್ಷಗಳ ಅವಧಿಯಲ್ಲಿ ಪೂರ್ಣಗೊಳಿಸಲಾಗುವುದು. | Steps are being taken to entrust the construction work to the appropriate government-owned construction agency, which will be completed in 2 to 3 years, depending on the availability of funds. |

ಸಂಖ್ಯೆ: ಕೌಉಜೀಇ 86 ಕೈತಪ್ರ 2021

(ಡಾ.ಸಿ.ಎನ್.ಅಶ್ವತ್ಥ ನಾರಾಯಣ)
ಉನ್ನತ ಶಿಕ್ಷಣ, ಐಟಿ-ಬಿಟಿ, ವಿಜ್ಞಾನ ಮತ್ತು
ತಂತ್ರಜ್ಞಾನ, ವಿದ್ಯುನ್ಮಾನ ಮತ್ತು
ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 683
ಸದಸ್ಯರ ಹೆಸರು : ಶ್ರೀ ನಂಜೇಗೌಡ ಕೆ.ವೈ (ಮಾಲೂರು)
ಉತ್ತರಿಸಬೇಕಾದ ದಿನಾಂಕ : 16.12.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ಮಾಲೂರು ವಿಧಾನ ಸಭಾ ಕ್ಷೇತ್ರದಲ್ಲಿ ಹಲವಾರು ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳಲ್ಲಿ ಹಾಗೂ ಪದವಿ ಪೂರ್ವ ಕಾಲೇಜುಗಳಲ್ಲಿ ಕೊಠಡಿಗಳ ಕೊರತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಹೊಸ ಶಾಲಾ ಕೊಠಡಿಗಳ ನಿರ್ಮಾಣಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು; ಯಾವ ಯಾವ ಗ್ರಾಮಗಳಲ್ಲಿ ಹೊಸ ಕಟ್ಟಡಗಳನ್ನು ನಿರ್ಮಾಣ ಮಾಡಲಾಗುತ್ತಿದೆ; (ಮಾಹಿತಿ ಒದಗಿಸುವುದು) | ಕಳೆದ ಮೂರು ವರ್ಷಗಳಲ್ಲಿ ಸರ್ಕಾರದಿಂದ ವಿವಿಧ ಯೋಜನೆಗಳಡಿ ಶಾಲಾ ಕಟ್ಟಡ ನಿರ್ಮಾಣಕ್ಕಾಗಿ ಬಿಡುಗಡೆಯಾದ ಅನುದಾನದ ವಿವರ ಈ ಕೆಳಕಂಡಂತಿದೆ. |

| ವರ್ಷ | ಯೋಜನೆ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಅನುದಾನ (ರೂ. ಲಕ್ಷಗಳಲ್ಲಿ) |
|---|---|---|---|---|
| 2018-19 | ಎಸ್.ಎಸ್.ಕೆ | 05 | 05 | 55.00 |
| | ಗಡಿನಾಡ ಅಭಿವೃದ್ಧಿ ಪ್ರಾಧಿಕಾರ | 03 | 03 | 30.00 |
| 2019-20 | ವಿಶೇಷ ಅಭಿವೃದ್ಧಿ ಯೋಜನೆ | 01 | 01 | 10.60 |
| 2020-21 | ಪ್ರಾಥಮಿಕ ಮತ್ತು ಪ್ರೌಢ ಶಾಲಾ ಕೊಠಡಿಗಳ ನಿರ್ಮಾಣ | 05 | 06 | 73.90 |
| | ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಲ್ಲಿ ಪ್ರಾಥಮಿಕ / ಪ್ರೌಢ ಶಾಲಾ ಕಟ್ಟಡ ನಿರ್ಮಾಣ | 10 | 10 | 89.70 |

| | | |
|---|---|---|
| | | ಕೋಲಾರ ಜಿಲ್ಲೆಯ ಮಾಲೂರು ವಿಧಾನಸಭಾ ಕ್ಷೇತ್ರದ ಸರ್ಕಾರಿ ಪದವಿ ಪೂರ್ವ ಕಾಲೇಜು, ಟೇಕಲ್ ಈ ಕಾಲೇಜಿಗೆ 2019-20 ನೇ ಸಾಲಿನಲ್ಲಿ ರೂ 100.00 ಲಕ್ಷ ವೆಚ್ಚದಲ್ಲಿ 06 ಹೆಚ್ಚುವರಿ ತರಗತಿ ಕೊಠಡಿ, 02 ಶೌಚಾಲಯ ಬ್ಲಾಕ್ ನಿರ್ಮಾಣ ಕಾಮಗಾರಿಯು ಪ್ರಗತಿಯಲ್ಲಿದೆ.<br>ಹಾಗೂ 2018-19ನೇ ಸಾಲಿನಲ್ಲಿ ಆರ್‌ಐಡಿಎಫ್-24ರ ಯೋಜನೆಯಡಿ ಸರ್ಕಾರಿ ಪದವಿ ಪೂರ್ವ ಕಾಲೇಜು, ಲಕ್ಕೂರು ಈ ಕಾಲೇಜಿಗೆ ರೂ 119.00 ಲಕ್ಷ ಅನುದಾನದಲ್ಲಿ 02 ಹೆಚ್ಚುವರಿ ತರಗತಿ ಕೊಠಡಿ, 02 ಪ್ರಯೋಗಾಲಯ ಕೊಠಡಿ, 02 ಶೌಚಾಲಯ ಬ್ಲಾಕ್‌ಗಳ ನಿರ್ಮಾಣ ಕಾಮಗಾರಿಯು ಮುಕ್ತಾಯದ ಹಂತದಲ್ಲಿದೆ.<br>2021-22ನೇ ಸಾಲಿನಲ್ಲಿ ಶತಮಾನೋತ್ಸವ ಪೂರೈಸಿದ ಶಾಲೆಗಳಿಗೆ ಅಗತ್ಯ ಮೂಲಭೂತ ಸೌಲಭ್ಯಗಳನ್ನು ಒದಗಿಸಲು ಕ್ರಿಯಾಯೋಜನೆ ರೂಪಿಸಲಾಗುತ್ತಿದೆ. |
| ಇ) | ಪ್ರಸಕ್ತ ಸಾಲಿನಲ್ಲಿ ಮಾಲೂರು ವಿಧಾನಸಭಾ ಕ್ಷೇತ್ರಕ್ಕೆ ಸರ್ಕಾರಿ ಶಾಲೆಗಳ ದುರಸ್ಥಿ ಹಾಗೂ ಶಿಥಿಲಾವಸ್ಥೆಯಲ್ಲಿರುವ ಶಾಲಾ ಕೊಠಡಿಗಳನ್ನು ಸರಿಪಡಿಸಲು ಅನುದಾನ ಬಿಡುಗಡೆ ಮಾಡಲಾಗಿದೆಯೇ? (ವಿವರ ಒದಗಿಸುವುದು) | • 2021-22ನೇ ಸಾಲಿನ ಅಮೃತ ಶಾಲಾ ಸೌಲಭ್ಯ ಯೋಜನೆಯಡಿ ಮಾಲೂರು ವಿಧಾನ ಸಭಾಕ್ಷೇತ್ರದ 4 ಸರ್ಕಾರಿ ಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ತಲಾ 10.00 ಲಕ್ಷಗಳಂತೆ ರೂ.40.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br>• 2021-22ನೇ ಸಾಲಿನ ರಾಜ್ಯ ಸರ್ಕಾರದ ಬಂಡವಾಳ ವೆಚ್ಚ ಯೋಜನೆಯಡಿ ಮಾಲೂರು ವಿಧಾನ ಸಭಾ ಕ್ಷೇತ್ರದ ಸರ್ಕಾರಿ ಶಾಲಾ ಕಟ್ಟಡಗಳ ದುರಸ್ಥಿಗೆ ರೂ.6.00 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿರುತ್ತದೆ. ಸದರಿ ಅನುದಾನವನ್ನು ಗರಿಷ್ಠ ಶಾಲೆಗಳಲ್ಲಿ ದುರಸ್ಥಿ ಕಾರ್ಯ ವಿಸ್ತರಿಸಲು ಸ್ಥಳೀಯವಾಗಿ ಜಾರಿಯಲ್ಲಿರುವ ವಿವಿಧ ಅಭಿವೃದ್ಧಿ ಯೋಜನೆಗಳ ಅನುದಾನವನ್ನು ಒಗ್ಗೂಡಿಸುವಿಕೆ (convergence) ಮೂಲಕ ಅನುಷ್ಠಾನಕ್ಕಾಗಿ ಸಂಬಂಧಿಸಿದ ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯನುಷ್ಠಾನ ಸಮಿತಿಯನ್ನು ರಚಿಸಿ ಶೀಘ್ರವಾಗಿ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲು ಆದೇಶ ಹೊರಡಿಸಲಾಗಿದೆ.<br>• ಶಾಲಾ ಕಟ್ಟಡಗಳ ದುರಸ್ಥಿಗಾಗಿ ರಾಜ್ಯ/ಜಿಲ್ಲಾ ವಿಪತ್ತು ನಿರ್ವಹಣಾ ನಿಧಿಯಡಿ ಹಾಗೂ ಇತರೆ ಲಭ್ಯವಿರುವ ಅನುದಾನ (ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ |

| | | |
|---|---|---|
| | | ಯೋಜನೆ ಡಿ.ಎಂ.ಎಫ್ ಯೋಜನೆ ಮತ್ತು ಜಿಲ್ಲಾ ಪಂಚಾಯತ್ ಸೇರ್ಪಡೆ ಹಾಗೂ ಮಾರ್ಪಾಡು ಯೋಜನೆಗಳಡಿ) ಬಿಡುಗಡೆ ಮಾಡಲು ಆಯಾ ಜಿಲ್ಲಾಧಿಕಾರಿಗಳಿಗೆ ಮತ್ತು ಜಿಲ್ಲಾ ಪಂಚಾಯತಿಯ ಮುಖ್ಯ ಕಾರ್ಯ ನಿರ್ವಹಣಾಧಿಕಾರಿಗಳಿಗೆ ಪ್ರಸ್ತಾವನೆ ಸಲ್ಲಿಸಿ ಅನುದಾನವನ್ನು ಬಿಡುಗಡೆ ಮಾಡಿಸಿಕೊಂಡು ಶಾಲಾ ಕಟ್ಟಡಗಳ ದುರಸ್ಥಿಯನ್ನು ಶೀಘ್ರವಾಗಿ ಕೈಗೊಳ್ಳುವಂತೆ ಆಯುಕ್ತರು ಸಾರ್ವಜನಿಕ ಶಿಕ್ಷಣ ಇಲಾಖೆ ಬೆಂಗಳೂರು ಇವರ ಸುತ್ತೋಲೆ ದಿನಾಂಕ:19.11.2021ರಲ್ಲಿ ರಾಜ್ಯದ ಎಲ್ಲಾ ಉಪನಿರ್ದೇಶಕರು (ಆಡಳಿತ) ಹಾಗೂ ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ನಿರ್ದೇಶಿಸಲಾಗಿದೆ.<br>• ಮಹಾತ್ಮಾ ಗಾಂಧಿ ನರೇಗಾ ಯೋಜನೆ ಅಡಿಯಲ್ಲಿ ಶಾಲೆಗಳಿಗೆ ಅಗತ್ಯವಿರುವ ಮೂಲಭೂತ ಸೌಕರ್ಯಗಳನ್ನು ಒದಗಿಸಲು 14 ಮತ್ತು 15ನೇ ಹಣಕಾಸು ಆಯೋಗದಲ್ಲಿ ಸಂಬಂಧಿಸಿದ ಗ್ರಾಮ ಪಂಚಾಯತಿಗಳಿಗೆ ಅವಕಾಶ ಕಲ್ಪಿಸಲಾಗಿದೆ. ಈ ಹಿನ್ನಲೆಯಲ್ಲಿ ಕ್ರಮವಹಿಸಿ ಅನುದಾನ ಹಂಚಿಕೆ ಮಾಡಲು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಗೆ ದಿನಾಂಕ:09.12.2021 ರಂದು ಪತ್ರ ಬರೆಯಲಾಗಿದೆ.<br>ಆಯವ್ಯಯದಲ್ಲಿ ಒದಗಿಸಲಾದ ಅನುದಾನದ ಲಭ್ಯತೆ ಹಾಗೂ ಅಗತ್ಯತೆಗೆ ಅನುಗುಣವಾಗಿ ಆದ್ಯತೆ ಮೇರೆಗೆ ಮಾಲೂರು ವಿಧಾನಸಭಾ ಕ್ಷೇತ್ರ ಒಳಗೊಂಡಂತೆ ಹಂತಹಂತವಾಗಿ ರಾಜ್ಯದಾದ್ಯಂತ ಶಾಲಾ ಕೊಠಡಿ/ಶೌಚಾಲಯ ದುರಸ್ಥಿ ಕಾರ್ಯಕೈಗೊಳ್ಳಲು ಕ್ರಮವಹಿಸಲಾಗಿದೆ. |

**ಇಪಿ: 297 ಯೋಸಕ 2021**

(ಬಿ.ಸಿ.ನಾಗೇಶ್)

**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**

# ಕರ್ನಾಟಕ ವಿಧಾನ ಸಭೆ

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 684
**ಮಾನ್ಯ ಸದಸ್ಯರ ಹೆಸರು** : ಡಾ|| ಭರತ್ ಶೆಟ್ಟಿ ವೈ. (ಮಂಗಳೂರು ನಗರ ಉತ್ತರ)
**ಉತ್ತರಿಸಬೇಕಾದ ದಿನಾಂಕ** : 16-12-2021
**ಉತ್ತರಿಸುವ ಸಚಿವರು** : ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

*****

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪಣಂಬೂರಿನಲ್ಲಿ ಅಂತರ್ ರಾಷ್ಟ್ರೀಯ ಸರ್ಫಿಂಗ್ ಮಾಡುವ ಯೋಜನೆ ಈ ಸಾಲಿನಲ್ಲಿ ಸೇರ್ಪಡೆಯಾಗಿದೆಯೇ? | ಸೇರ್ಪಡೆಯಾಗಿರುವುದಿಲ್ಲ. |

ಸಂಖ್ಯೆ: **TOR 312 TDV 2021**

(ಆನಂದ್ ಸಿಂಗ್)
ಪ್ರವಾಸೋದ್ಯಮ ಹಾಗೂ
ಪರಿಸರ ಮತ್ತು ಜೀವಿಶಾಸ್ತ್ರ ಸಚಿವರು

# ಕರ್ನಾಟಕ ವಿಧಾನ ಸಭೆ

| | | |
|---|---|---|
| **ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** | : | **685** |
| **ಸದಸ್ಯರ ಹೆಸರು** | : | **ಡಾ|| ಭರತ್ ಶೆಟ್ಟಿ. ವೈ (ಮಂಗಳೂರು ನಗರ ಉತ್ತರ)** |
| **ಉತ್ತರಿಸಬೇಕಾದ ದಿನಾಂಕ** | : | **16.12.2021** |
| **ಉತ್ತರಿಸುವ ಸಚಿವರು** | : | **ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು** |

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ದಕ್ಷಿಣ ಕನ್ನಡ ಜಿಲ್ಲೆಗೆ ಸಂಬಂಧಿಸಿದಂತೆ ಸರ್ಕಾರಿ ಶಾಲೆಗಳಿಗೆ ಬಿಡುಗಡೆಯಾದ ಅನುದಾನವೆಷ್ಟು; (ವಿವರ ಒದಗಿಸುವುದು) | ದಕ್ಷಿಣ ಕನ್ನಡ ಜಿಲ್ಲೆಯ ಸರ್ಕಾರಿ ಶಾಲೆಗಳಿಗೆ 2021-22ನೇ ಸಾಲಿನಲ್ಲಿ ಈವರೆವಿಗೂ ಬಿಡುಗಡೆಯಾದ ಒಟ್ಟಾರೆ ಅನುದಾನ ರೂ.28,319.03 ಲಕ್ಷಗಳಾಗಿದ್ದು ಅದರ ವಿವರಣೆ ಈ ಕೆಳಕಂಡಂತಿರುತ್ತದೆ. |

| ಕ್ರ ಸಂ | ಯೋಜನೆ | ಬಿಡುಗಡೆ ಮೊತ್ತ (ರೂ.ಲಕ್ಷಗಳಲ್ಲಿ) |
|---|---|---|
| 1 | ಅಮೃತ ಶಾಲಾ ಸೌಲಭ್ಯ ಯೋಜನೆಯಡಿ ಸರಕಾರಿ ಶಾಲೆಗಳಿಗೆ ಮೂಲಭೂತ ಸೌಕರ್ಯ ಒದಗಿಸಲು ಜಿಲ್ಲೆಯ 27 ಶಾಲೆಗಳಿಗೆ ತಲಾ ರೂ.10.00 ಲಕ್ಷ | 270.00 |
| 2 | ನರೇಗಾ ಯೋಜನೆಯಡಿ ಶಿಕ್ಷಣ ಇಲಾಖೆ ಅನುದಾನ ಒಗ್ಗೂಡಿಸಿ 32 ಸರ್ಕಾರಿ ಶಾಲೆಗಳಲ್ಲಿ ಶೌಚಾಲಯ ನಿರ್ಮಾಣ | 72.80 |
| 3 | ಸರ್ಕಾರಿ ಶಾಲೆಗಳ ದುರಸ್ಥಿಗಾಗಿ 08 ವಿಧಾನಸಭಾ ಕ್ಷೇತ್ರಗಳಿಗೆ ತಲಾ ರೂ.6.00 ಲಕ್ಷ ನಿಗಧಿ ಪೈಕಿ ಬಿಡುಗಡೆ | 40.00 |
| 4 | ಸರ್ಕಾರಿ ಶಾಲೆಗಳ ಕಟ್ಟಡ ನಿರ್ಮಾಣಕ್ಕಾಗಿ 2 ವರ್ಷದ ಪ್ಯಾಕೇಜಿನಡಿ ಬಿಡುಗಡೆ | 70.97 |
| 5 | ಸರ್ಕಾರಿ ಪ್ರಾಥಮಿಕ ಶಾಲಾ ಶಿಕ್ಷಕರ ವೇತನ | 15999.15 |
| 6 | ಸರ್ಕಾರಿ ಪ್ರಾಥಮಿಕ ಶಾಲಾ ವೇತನೇತರ | 99.22 |
| 7 | ಸರ್ಕಾರಿ ಪ್ರೌಢ ಶಾಲಾ ಶಿಕ್ಷಕರ ವೇತನ | 8473.00 |
| 8 | ಶಾಲಾ ಮಾತೆ | 46.31 |
| 9 | ಸಮಗ್ರ ಶಿಕ್ಷಣ ಕರ್ನಾಟಕ – ವೇತನಕ್ಕಾಗಿ | 2545.93 |
| 10 | ಶುಲ್ಕ ಮರುಪಾವತಿ | 42.13 |

<table>
<tr><td></td><td>•</td><td>

| | | |
|---|---|---|
| 11 | ಸಾಮಾಗ್ರಿ ಸರಬರಾಜು | 45.00 |
| ಸಮಗ್ರ ಶಿಕ್ಷಣ ಕರ್ನಾಟಕ ಕಾರ್ಯಕ್ರಮ ಅಡಿಯಲ್ಲಿ ಬಿಡುಗಡೆಯಾದ ಅನುದಾನಗಳು | | |
| 1 | ಶಾಲಾನುದಾನ ಪ್ರಾಥಮಿಕ ಶಾಲೆಗಳಿಗೆ | 28.70 |
| 2 | ಶಾಲಾನುದಾನ ಸೆಕೆಂಡರಿ ಶಾಲೆಗಳಿಗೆ | 21.43 |
| 3 | ಸೆಕೆಂಡರಿ ಶಾಲೆಗಳಿಗೆ ಕ್ರೀಡಾ ಅನುದಾನ | 10.00 |
| 4 | ಎನ್‌ಎಸ್‌ಕ್ಯೂಎಫ್ | 01.20 |
| 5 | ಕರ್ನಾಟಕ ಪಬ್ಲಿಕ್ ಶಾಲೆ | 300.00 |
| 6 | ಶಿಕ್ಷಕರಿಗೆ ಗುರುತಿನ ಚೀಟಿ | 02.36 |
| 7 | ಗ್ರಂಥಾಲಯ | 30.97 |
| 8 | ನೇತಾಜಿ ಸುಭಾಷ್‌ಚಂದ್ರಬೋಸ್ ಆವಾಸಿಯ | 18.00 |
| 9 | ಉನ್ನತೀಕರಿಸಿದ ಶಾಲೆಗಳ ಕಟ್ಟಡ ನಿರ್ಮಾಣ | 201.86 |
| | **ಒಟ್ಟು** | **28,319.03** |

</td></tr>
<tr><td>ಆ)</td><td>ಪದವಿ ಕಾಲೇಜಿನ ಅತಿಥಿ ಶಿಕ್ಷಕರಿಗೆ/ತಾಂತ್ರಿಕ ಕಾಲೇಜಿನ ಅತಿಥಿ ಶಿಕ್ಷಕರಿಗೆ ವೇತನ ಸರಿಯಾದ ಸಮಯಕ್ಕೆ ಪಾವತಿಯಾಗದೇ ವಿಳಂಬವಾಗಲು ಕಾರಣಗಳೇನು?</td><td>ಸರ್ಕಾರವು ಆರ್ಥಿಕ ವರ್ಷದ ಆಯವ್ಯಯದಲ್ಲಿ ಒದಗಿಸಿರುವ ಅನುದಾನವನ್ನು ನಿಯಮಾನುಸಾರ ತ್ರೈಮಾಸಿಕ ಕಂತಿನಲ್ಲಿ ಮಾಡಲಾಗುತ್ತಿದೆ. ಸರ್ಕಾರದಿಂದ ಅನುದಾನ ಬಿಡುಗಡೆಯಾದ ನಂತರ ವಿಳಂಬಕ್ಕೆ ಆಸ್ಪದವಿಲ್ಲದಂತೆ ಕಾಲೇಜು ಮತ್ತು ತಾಂತ್ರಿಕ ಶಿಕ್ಷಣ ಇಲಾಖೆ ಆಯುಕ್ತಾಲಯವು ಅತಿಥಿ ಉಪನ್ಯಾಸಕರಿಗೆ ಸಕಾಲದಲ್ಲಿ ಗೌರವಧನ ಪಾವತಿಸಲು ಸಂಬಂಧಿಸಿದ ಕಾಲೇಜುಗಳಿಗೆ ಬಿಡುಗಡೆ ಮಾಡಲಾಗುತ್ತಿದೆ.</td></tr>
</table>

**ಇಪಿ: 300 ಯೋಸಕ 2021**

(ಬಿ.ಸಿ.ನಾಗೇಶ್)
**ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು**